ಕನ್ನಡ ವಿಶ್ವವಿದ್ಯಾಲಯ ಹಂಪಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ವಿದ್ಯಾರಣ್ಯ ೫೮೩ ೨೭೬




ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ನಿಬಂಧ ೨೦೧೮-೧೯

ವಿಷಯ:

# "ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ, ಸಾಮಾಜಿಕ ಮೌಲ್ಯಗಳು"

ಸಂಶೋಧನಾ ವಿದ್ಯಾರ್ಥಿ:
ಕಿರಣ್ ಕುಮಾರ್ ಆರ್
ನೋಂದಣಿ ಸಂಖ್ಯೆ: ೧೮೨೦೦೧೦೩೦೦೩೫--೨೦೧೯

ಮಾರ್ಗದರ್ಶಕರು:
ಡಾ. ಶಿವರಾಜು ಬಿ.ಇ.
ಕನ್ನಡ ಸಹ ಪ್ರಾಧ್ಯಾಪಕರು
ಆಕ್ಸ್‌ಫರ್ಡ್ ಕಾಲೇಜ್ ಆಫ್ ಬಿಜಿನೆಸ್ ಮ್ಯಾನೇಜ್‌ಮೆಂಟ್
೪ನೇ ವಲಯ, ಹೆಚ್.ಎಸ್.ಆರ್. ಬಡಾವಣೆ
ಬೆಂಗಳೂರು-೫೬೦ ೧೦೨

ಮಾನ್ಯತಾ ಸಂಸ್ಥೆ:
ಕನ್ನಡ ಸಾಹಿತ್ಯ ಪರಿಷತ್ತು
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

ಕನ್ನಡ ವಿಶ್ವವಿದ್ಯಾಲಯ ಹಂಪಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ವಿದ್ಯಾರಣ್ಯ – ೫೮೩ ೨೭೬




ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ನಿಬಂಧ ೨೦೧೮–೧೯

ವಿಷಯ:

# "ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ, ಸಾಮಾಜಿಕ ಮೌಲ್ಯಗಳು"

ಸಂಶೋಧನಾ ವಿದ್ಯಾರ್ಥಿ:
**ಕಿರಣ್ ಕುಮಾರ್ ಆರ್**
ನೋಂದಣಿ ಸಂಖ್ಯೆ: ೧೮೨೦೦೧೦೩೦೦೩೫–೨೦೧೯

ಮಾರ್ಗದರ್ಶಕರು:
ಡಾ. ಶಿವರಾಜು ಬಿ.ಇ.
ಕನ್ನಡ ಸಹ ಪ್ರಾಧ್ಯಾಪಕರು
ಆಕ್ಸ್‌ಫರ್ಡ್ ಕಾಲೇಜ್ ಆಫ್ ಬಿಜಿನೆಸ್ ಮ್ಯಾನೇಜ್‌ಮೆಂಟ್
೪ನೇ ವಲಯ, ಹೆಚ್.ಎಸ್.ಆರ್. ಬಡಾವಣೆ
ಬೆಂಗಳೂರು–೫೬೦ ೧೦೨

ಮಾನ್ಯತಾ ಸಂಸ್ಥೆ:
ಕನ್ನಡ ಸಾಹಿತ್ಯ ಪರಿಷತ್ತು
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು–೫೬೦ ೦೧೮



# ಮಾರ್ಗದರ್ಶಕರ ದೃಢೀಕರಣ ಪತ್ರ

ಕು॥ ಕಿರಣ್ ಕುಮಾರ್ ಆರ್ ರವರು ಎಂ.ಫಿಲ್. ಪದವಿಗಾಗಿ ಬರೆದು ಸಿದ್ಧಪಡಿಸಿರುವ "ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಕ, ಸಾಮಾಜಿಕ ಮೌಲ್ಯಗಳು" ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೩೦/೦೭/೨೦೧೮
ಸ್ಥಳ: ಬೆಂಗಳೂರು

ಮಾರ್ಗದರ್ಶಕರು

ಡಾ. ಶಿವರಾಜು ಬಿ.ಇ.
ಕನ್ನಡ ಸಹ ಪ್ರಾಧ್ಯಾಪಕರು,
ಆಕ್ಸ್‌ಫರ್ಡ್ ಕಾಲೇಜ್ ಆಫ್
ಬಿಜಿನೆಸ್ ಮ್ಯಾನೇಜ್‌ಮೆಂಟ್,
೩ನೇ ವಲಯ, ಹೆಚ್.ಎಸ್.ಆರ್. ಬಡಾವಣೆ,
ಬೆಂಗಳೂರು-೫೬೦ ೧೦೨

ಡಾ. ಶಿವರಾಜು. ಬಿ.ಇ.
ಸಹಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಆಕ್ಸ್‌ಫರ್ಡ್ ಕಾಲೇಜ್ ಆಫ್ ಬಿಸಿನೆಸ್ ಮ್ಯಾನೇಜ್‌ಮೆಂಟ್
ಎಚ್.ಎಸ್.ಆರ್. ಬಡಾವಣೆ, ಬೆಂಗಳೂರು - 560 102.

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ "ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ, ಸಾಮಾಜಿಕ ಮೌಲ್ಯಗಳು" ಎಂಬ ಶೀರ್ಷಿಕೆಯ ಈ ಎಂ.ಫಿಲ್. ಸಂಶೋಧನಾ ನಿಬಂಧವನ್ನು ಡಾ. ಶಿವರಾಜು ಜಿ.ಇ., ಕನ್ನಡ ಸಹ ಪ್ರಾಧ್ಯಾಪಕರು, ಆಕ್ಸ್‌ಫರ್ಡ್ ಕಾಲೇಜ್ ಆಫ್ ಬಿಜಿನೆಸ್ ಮ್ಯಾನೇಜ್‌ಮೆಂಟ್, ೬ನೇ ವಲಯ, ಹೆಚ್.ಎಸ್.ಆರ್. ಬಡಾವಣೆ, ಬೆಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಈ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಈ ಮೂಲಕ ಸಲ್ಲಿಸುತ್ತಿದ್ದೇನೆ.

Kiran Kumar.R.

ಕಿರಣ್ ಕುಮಾರ್ ಆರ್

(ಸಂಶೋಧನಾ ವಿದ್ಯಾರ್ಥಿ)

ನೋಂ.ಸಂಖ್ಯೆ:ಗಲ ೨೦೦೧೦೩೦೦೩೫-೨೦೧೯

ದಿನಾಂಕ: ೩೦/೦೭/೨೦೧೯

ಸ್ಥಳ: ಬೆಂಗಳೂರು

# ಪರಿವಿಡಿ

ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಭಾರತೀಯ ಸಾಂಸ್ಕೃತಿಕ ಬದುಕಿಗೆ ಭಕ್ತಿಯೇ ಬೆನ್ನೆಲುಬು. ಲೌಕಿಕ ಜೀವನದಲ್ಲಿ ಭಕ್ತಿಯೆಂಬುದು ವ್ಯಕ್ತಿಯ ಪಾಲಿಗೆ ಒಂದು ಕ್ಷೇಮಾಭಾವನೆಯನ್ನು ಒದಗಿಸುವ ಕೃಪಾ ರಕ್ಷೆ. ಬಂಗಾಳದಲ್ಲಿ ಒಂದು ಕಾಲದಲ್ಲಿ ಪ್ರಖರವಾಗಿ ಬೆಳಗಿದ ಚೈತನ್ಯ ಪಂಥ ಭಕ್ತಿಗೆ ರಸದ ಸ್ಥಾನವನ್ನೇ ಕಲ್ಪಿಸಿಕೊಟ್ಟಿತು. ಶಾಂತ, ದಾಸ್ಯ, ಸಖ್ಯ, ಮಧುರ ಮತ್ತು ವಾತ್ಸಲ್ಯಗಳೆಂಬ 'ಪಂಚಭಾವ'ಗಳಲ್ಲಿ ಭಕ್ತಿಯ ನೆಲೆಯನ್ನು ಕಂಡುಕೊಂಡ ಈ ಪಂಥದವರು ಮಧುರ ಭಾವವನ್ನೇ ಆರಿಸಿಕೊಂಡರು. ದಕ್ಷಿಣ ಭಾರತದಲ್ಲಿ ಸುಮಾರು ಹನ್ನೆರಡನೆಯ ಶತಮಾನದಲ್ಲಿ ಹಚ್ಚಲಾದ ಭಕ್ತಿಯ ಹಣತೆ ಕರ್ಣಾಟಕದ ಹರಿದಾಸರ ಕೈಯಲ್ಲಿ ಉಜ್ವಲವಾಗಿ ಬೆಳಗುವ ದೀವಿಗೆಯಾಯಿತು. ಇದರ ಬೆಳಕಲ್ಲಿ ಹರಿದಾಸರು ತಮ್ಮ ಒಳ-ಹೊರಗನ್ನು ಶೋಧಿಸಿಕೊಂಡರು ; ಸಮಾಜದ ಓರೆ-ಕೋರೆಗಳನ್ನೂ, ಅಶುಚಿ-ಅರಕೆಗಳನ್ನೂ ತೋರಿಸಿಕೊಟ್ಟರು ; ಎಲ್ಲಕ್ಕೂ ಮಿಗಿಲಾಗಿ ಲೌಕಿಕ ಜೀವನದಿಂದ ಪಾರಮಾರ್ಥಿಕ ಎತ್ತರಕ್ಕೇರುವ ದಾರಿಯನ್ನು ನಿರ್ದೇಶಿಸಿದರು. ಹೀಗೆ ಮಾಡುವಾಗ ಕನ್ನಡ ಸಾಹಿತ್ಯ ವಾಹಿನಿಗೆ ಭಕ್ತಿ ಸಾಹಿತ್ಯದ ಶಾಖೆಯೊಂದು ಕೀರ್ತನೆ, ಸುಳಾದಿ, ಉಗಾಭೋಗ ಮುಂತಾದ ಸುಂದರ ಸುಳಿಗಳೊಡನೆ ಬಂದು ಸೇರುವಂತೆ ಮಾಡಿದರು. ಪರಂಪರೆಯ ಪ್ರಕಾರ ವೇದೋಪನಿಷತ್ತುಗಳಲ್ಲಿನ ಗಹನ ತತ್ತ್ವಗಳನ್ನು ಸಾಮಾನ್ಯರಿಗೆ ದೊರಕಿಸಿಕೊಡುವ ಸಲುವಾಗಿ ಶುಕಮುನಿಗಳು ಭಾಗವತವನ್ನು ರಚಿಸಿದರು. ಹೀಗೆಯೇ "ಜನಸಾಮಾನ್ಯರು ಭಕ್ತಿಯಿಂದ ಹಾಡಲು ಸಾಧ್ಯವಾಗುವಂತೆ ತತ್ತ್ವವಿಚಾರಗಳನ್ನು ಅರಿಯುವಂತೆ ಭಾಗವತ ಹರ್ಷವನ್ನು ಸವಿಯುವಂತೆ" ಹರಿದಾಸರು ತಿಳಿಯಾದ ಕನ್ನಡವನ್ನು ಪದ ಪದ್ಯಗಳಲ್ಲಿ ರಚಿಸಿದರು. ಆಳ್ವಾರರು ಶ್ರೀ ರಾಮಾನುಜರ ವಿಶಿಷ್ಟಾದ್ವೈತ ತತ್ತ್ವವನ್ನು ತಮಿಳುನಾಡಿನ ಮನೆಮನೆಗಳಿಗೆ ಆಡುಮಾತಿನಲ್ಲಿ ತಲುಪಿಸುವ ಪ್ರಯತ್ನ ಮಾಡಿದರು. ಹೀಗೆ ಮಾಡುವುದರ ಜೊತೆಗೇ, ಪಂಡಿತರ ಪಾಲಿಗೇ ಮೀಸಲಾಗಿದ್ದ ಸಾಹಿತ್ಯವನ್ನು-ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಮಾಡಿದಂತೆ-ಸಾಮಾನ್ಯರ ಹತ್ತಿರಕ್ಕೆ ತರುವ ಕೆಲಸವನ್ನೂ ಮಾಡಿದರು.

## ಅಧ್ಯಯನ ಉದ್ದೇಶ:

ಕರ್ನಾಟಕದಲ್ಲಿ ಹರಿದಾಸ ಪರಂಪರೆ ಮಧ್ವಾಚಾರ್ಯರಿಂದಲೇ ಆರಂಭವಾಯಿತೆಂದು ನಂಬುವವರಿದ್ದಾರೆ. ಆದರೆ ಶ್ರೀಪಾದರಾಜರೇ ವಾಸ್ತವವಾಗಿ ಈ ಪರಂಪರೆಯ ಆದ್ಯ ಪ್ರವರ್ತಕರು ಎಂಬುದು ವಿದ್ವಾಂಸರ ಅಭಿಪ್ರಾಯ. ಶ್ರೀಪಾದರಾಜರ ಸಂನ್ಯಾಸಿ ಶಿಷ್ಯ ವ್ಯಾಸರಾಯರು ಹರಿದಾಸ ಪರಂಪರೆಗೆ ಕ್ರಿಯಾಪೂರ್ಣ ಚಾಲನೆ ಕೊಟ್ಟವರೆಂಬುದು ಐತಿಹಾಸಿಕ ಸತ್ಯ. ವ್ಯಾಸರಾಯರು ಪಾಂಡಿತ್ಯ-ಭಕ್ತಿಗಳ ನಡುವಣ ಸಮನ್ವಯಕ್ಕಾಗಿ ಶ್ರಮಿಸಿದವರು. ಅವರ ಶಿಷ್ಯವರ್ಗದಲ್ಲಿ ವಿಜಯೀಂದ್ರ ತೀರ್ಥರು, ಗೋವಿಂದ ಒಡೆಯರು, ನಾರಾಯಣ ಯತಿಗಳು, ಮೊದಲಾದ ಪ್ರಕಾಂಡ ಪಂಡಿತರಿದ್ದರು ; ಪುರಂದರದಾಸರು, ಕನಕದಾಸರು, ವೈಕುಂಠದಾಸರು ಮೊದಲಾದ ಹರಿದಾಸರೂ ಇದ್ದರು. 'ವ್ಯಾಸಕೂಟ' 'ದಾಸಕೂಟ'ಗಳೆನ್ನಬಹುದಾದ ಈ ಎರಡೂ ಗುಂಪುಗಳು ಪರಸ್ಪರ ಕಲೆತು ಜ್ಞಾನ ಮತ್ತು ಭಕ್ತಿಗಳ ಅರ್ಥ, ಮಹತ್ವಗಳನ್ನು ವಿನಿಮಯ ಮಾಡಿಕೊಂಡು 'ಪೂರ್ಣಪ್ರಜ್ಞ'ರಾಗಲು ಅನುವು ಮಾಡಿಕೊಟ್ಟವರು ವ್ಯಾಸರಾಯರು. ಹೀಗಾಗಿ ಅವರ ಪ್ರಭಾವ ಪಂಡಿತರ ಮೇಲೆ ಆದಷ್ಟೇ ತೀವ್ರವಾಗಿ ಸಾಮಾನ್ಯರ ಪ್ರತಿನಿಧಿಗಳಾಗಿದ್ದ ದಾಸರ ಮೇಲೂ ಆಯಿತು. ಮುಖ್ಯವಾಗಿ ಪುರಂದರದಾಸ, ಕನಕದಾಸರ ಮೇಲೆ ವ್ಯಾಸರಾಯರು ಬೀರಿದ ಪ್ರಭಾವ ಹರಿದಾಸ ಸಾಹಿತ್ಯದ ಇತಿಹಾಸದಲ್ಲಿ ದಾಖಲಿಸಬೇಕಾದ ಸಂಗತಿ. 'ದಾಸರೆಂದರೆ ಪುರಂದರದಾಸರಯ್ಯಾ' ಎಂದು ನಿಮಾತ್ಸರ್ಯದಿಂದ, ಮುಕ್ತ ಮನಸ್ಸಿನಿಂದ ವ್ಯಾಸರಾಯರು ಹೊಗಳಿರುವುದು ಭಕ್ತಿ ಪಂಥಕ್ಕೆ ಅವರು ನೀಡಿದ ಮನ್ನಣೆಗೆ ಸಾಕ್ಷಿ.

ಪುರಂದರದಾಸರಷ್ಟೇ ವ್ಯಾಸರಾಯರಿಗೆ ಪ್ರಿಯರಾದ ಇನ್ನೊಬ್ಬ ಶಿಷ್ಯರು ಕನಕದಾಸರು. ಕನಕ-ಪುರಂದರರಿಬ್ಬರೂ ದಾಸಸಾಹಿತ್ಯದ ಅಶ್ವಿನೀ ದೇವತೆಗಳು ಎಂಬ ಮಾತು ಅರ್ಥಪೂರ್ಣ. ಕನಕರು ಕೇವಲ ದಾಸರಲ್ಲ ; ಕವಿಗಳೂ ಕೂಡ. ಸಮಾಜದ ಕೆಳವರ್ಗದಿಂದ ಬಂದ ಕನಕದಾಸರು ವ್ಯಾಸರಾಯರ ಪರಮಶಿಷ್ಯರಾದರು ; ಪುರಂದರದಾಸರ ಆತ್ಮೀಯ ಮಿತ್ರರಾದರು ; ದಾಸಶ್ರೇಷ್ಠರೆನ್ನಿಸಿಕೊಂಡರು. ಇದು ಕನಕದಾಸರ ವ್ಯಕ್ತಿತ್ವದ ಆಯಾಮಗಳನ್ನು ಸೂಚಿಸುವುದಲ್ಲದೆ ದಾಸಕೂಟದ ವಿಶಾಲ ಮನೋ ಧರ್ಮದ ದ್ಯೋತಕವೂ ಆಗಿದೆ.

ದಾಸ ಸಾಹಿತ್ಯದಲ್ಲಿ ಕವಿತೆಯ ಸೊಬಗನ್ನೂ ಸಾಮಾಜಿಕ ಕಳಕಳಿಯನ್ನೂ ಜತೆಗೂಡಿಸಿ ವಾಙ್ಮಯಸಾಹಿತ್ಯರಂಗವನ್ನು ಶ್ರೀಮಂತಗೊಳಿಸಿದವರು ಮುಖ್ಯವಾಗಿ ಇಬ್ಬರು: ಪುರಂದರದಾಸರು ಮತ್ತು ಕನಕದಾಸರು. ಪುರಂದರದಾಸರು ಮತ್ತು ಕನಕದಾಸರು ಹರಿದಾಸ ಸಾಹಿತ್ಯದ ಎರಡು ಕಣ್ಣು. ಕಣ್ಣು ಎರಡಾದರೂ ನೋಟ ಒಂದೇ ಇರುವಂತೆ ಈ ಮಹನೀಯ ಸಾಧಿಸಿದ ಸಾಧನೆಗಳು ಒಂದೇ ಮಟ್ಟದ್ದಾಗಿದ್ದು ಮಹತ್ತ್ವದ್ದಾಗಿವೆ. ವ್ಯಾಸರಾಯರ 'ಚರಣಕಮಲ

ದರ್ಶನವೆನಗೇಸುಜ್ಞನದ ಸುಕೃತಫಲದಿ ದೊರೆಕಿತೊ' ಎಂದು ಪುರಂದರದಾಸರು ವ್ಯಾಸರಾಯರನ್ನು ಸ್ತುತಿಸಿದ್ದಾರೆ. ಕನಕದಾಸರನ್ನು ಕುರಿತು 'ಕನಕದಾಸನ ಮೇಲೆ ದಯಮಾಡಲು ವ್ಯಾಸಮುನಿ ಮಠಿಕೆರೆಲ್ಲರು ದೂರುತಿಹರೊ' ಎಂದು ಕೀರ್ತನೆಯನ್ನು ರಚಿಸಿದ್ದಾರೆ. ಕನಕದಾಸರ ಕೀರ್ತನೆಗಳಲ್ಲೆಲ್ಲೂ ವ್ಯಾಸರಾಯರ ಉಲ್ಲೇಖವಿಲ್ಲ. 'ಮಗುವು ಕಾಣಿರಯ್ಯ ಮಾಯದ ಮಗುವು ಕಾಣಿರಯ್ಯ ಸುಗುಣ ವಾದಿರಾಜರೆ ಮೂಜಗವನು ತನ್ನುದರದೊಳಿಟ್ಟು' ಎನ್ನುವ ಕೀರ್ತನೆಯಲ್ಲಿ ವಾದಿರಾಜರನ್ನು, 'ತಿರಿದುಂಬದಾಸರ ಕೈಯ ಕಪ್ಪವ ಕಟ್ಟಿಸಿಕೊಂಡೆ ತಿರುಮಲಾಚಾರ್ಯ ಶ್ರೀಗುರುವೆ ಬಲ್ಲ' ಎನ್ನುವಲ್ಲಿ ತಿರುಮಲಾಚಾರ್ಯ ಗುರುಗಳನ್ನು ನೆನೆದಿದ್ದಾರೆ. ವ್ಯಾಸರಾಯರನ್ನು ಪ್ರಹ್ಲಾದನ ಅವತಾರ, ಪುರಂದರರನ್ನು ನಾರದರ ಅವತಾರ ಎನ್ನುವ ಭಾವನೆಯಿದೆ. ಈ ಮಾತಿಗೆ ಪೂರಕವಾಗಿ ಕನಕದಾಸರ 'ಯಮನು ಮುನ್ನೆ ಮಾಂಡವ್ಯಶಾಪದಿಂದೆರಡು ಜನುಮ ಶೂದ್ರಯೋನಿಯೊಳಗೆ ಪುಟ್ಟಿದನು ಮೊದಲ ಜನುಮ ವಿದುರನಾಗಿ ಕುರುಬರ ಕುಲದಲ್ಲಿ ಜನಿಸಿದೆನಗೀ ಜನುಮದಲ್ಲಿ ಮುಕ್ತಿ ಎಂತು ಎಂಬೆ' ಎನ್ನುವ ಕೀರ್ತನೆ ನಿಲ್ಲುತ್ತದೆ.

## ಅಧ್ಯಯನ ವ್ಯಾಪ್ತಿ ಮತ್ತು ಸ್ವರೂಪ:

ವಚನಕಾರರಂತೆಯೇ ಹರಿದಾಸರನ್ನೂ ತೀವ್ರವಾಗಿ ಕಾಡಿದ ಒಂದು ಅಂಶವೆಂದರೆ ಸಾಮಾಜಿಕ ಅಸಮಾನತೆ. ಜಾತಿ ಎಂಬ ಶಾಪ ಎಲ್ಲಕ್ಕೂ ನಮ್ಮ ಜನವನ್ನು ಕಾಡುತ್ತಲೇ ಬಂದಿದೆ. ಶಂಕರ, ರಾಮಾನುಜ, ಬಸವ, ಅಂಬೇಡ್ಕರ್ ಈ ಎಲ್ಲರೂ ಜಾತಿಯ ಪಿಡುಗನ್ನು ಮೂಲೋತ್ಪಾಟನೆ ಮಾಡುವ ಪ್ರಯತ್ನವನ್ನು ತಮ್ಮ ತಮ್ಮ ಮಿತಿಯಲ್ಲಿ ಮಾಡಿದರೂ, ಅದು ಮತ್ತೆ ಮತ್ತೆ ತಲೆಯೆತ್ತುತ್ತಲೇ ಇದೆ. ವ್ಯಾಸರಾಯರು ತಮ್ಮ ಶಿಷ್ಯವರ್ಗಕ್ಕೆ ಕನಕದಾಸರ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಪ್ರಾಯೋಗಿಕವಾಗಿ ತೋರಿಸಿಕೊಟ್ಟು, ತಮ್ಮ ಕುಲೀನ ಶಿಷ್ಯರ ಬಾಯಿ ಮುಚ್ಚಿಸಬೇಕಾಯಿತು. 'ಕುಲ' ಎನ್ನುವ ಪರಿಕಲ್ಪನೆಯನ್ನು ಶೋಧಿಸಿ, ಅದರ ನಿಜವಾದ ಅರ್ಥವನ್ನು ಜನಕ್ಕೆ ತಿಳಿಸುವ ಕೆಲಸವನ್ನು ಮಾಡಬೇಕಾದ ಅನಿವಾರ್ಯ ಸ್ಥಿತಿ ಶಿವಶರಣರ ಕಾಲದಲ್ಲಿದ್ದಂತೆ, ಹರಿದಾಸರ ಕಾಲದಲ್ಲಿಯೂ ಇತ್ತು. ಪುರಂದರ-ಕನಕರಿಬ್ಬರೂ ಕುಲಪರಿಕಲ್ಪನೆಯ ವಿಶ್ಲೇಷಣೆ ಮಾಡಿದ್ದಾರೆ.

'ಹೊಲೆಯ ಹೊರಗಿಹನೆ, ಊರೊಳಗಿಲ್ಲವೆ ?' ಎಂದು ಪ್ರಾರಂಭವಾಗುವ ಪುರಂದರದಾಸರ ಕೀರ್ತನೆಗಳಲ್ಲಿ 'ಹೊಲೆಯ' ಎನ್ನುವ ಪದ ಜಾತಿಸೂಚಕವಲ್ಲ, ಗುಣಸೂಚಕವಾದುದು ಎಂಬುದು ಸ್ಪಷ್ಟವಾಗಿಯೇ ಇದೆ. ಅವರ ಪ್ರಕಾರ 'ಹೇಳಿದ ಶಸ್ತ್ರವನ್ನು ತಿಳಿಯದವ', ಇದ್ದೂ 'ದಾನಧರ್ಮವ ಮಾಡದವ', 'ಹುಸಿಯಾಡುವವ', 'ಉಂಡಮನೆಗೆರಡು

ಬಗೆಯುವವ' ಇಂಥವರೆಲ್ಲರೂ ಹೊಲೆಯರು. ಪುರಂದರರು 'ಬ್ರಾಹ್ಮಣನೆಂದರೆ ಬ್ರಹ್ಮನ ತಿಳಿದವನು' ಎಂಬ ವ್ಯಾಖ್ಯೆಯನ್ನು ಕೊಟ್ಟು ಜಾತಿ ಎಂಬುದು ಹುಟ್ಟಿನಿಂದ ಬಂದುದಲ್ಲ ಎಂಬುದನ್ನು ಸೂಚಿಸಿದ್ದಾರೆ. ಇದೇ ವಿಚಾರವನ್ನು ತೀವ್ರವಾಗಿ:

**"ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ**

**ಗಣಗಣ ಗಂಟೆ ಬಾರಿಸುವರಯ್ಯಾ**

**ತನುವಿನ ಕೋಪವು ಹೊಲೆಯಲ್ಲವೇ ?**

**ಪರಧನ ಪರಸತಿ ಹೊಲೆಯಲ್ಲವೇ ?**

**ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ**

**ಇದಕೇನೋ ಮದ್ದೋ ಪುರಂದರ ವಿಠಲ ?"**

–ಎಂದು ಮಡಿವಂತರೆನ್ನಿಸಿಕೊಂಡವರ ಮನಸ್ಸನ್ನು ಚುಚ್ಚಿ ಜಾತಿ ತತ್ವವನ್ನು ಕುರಿತು ಮರುಚಿಂತನೆ ನಡೆಸುವಂತೆ ಮಾಡಿದ್ದಾರೆ.

ಹುಟ್ಟಿನಿಂದ ಮೇಲ್ವರ್ಗಕ್ಕೆ ಸೇರಿದ ವ್ಯಾಸರಾಗಲೀ, ಪುರಂದರದಾಸರಾಗಲೀ, ಜಾತಿಪದ್ಧತಿಯಿಂದಾಗುವ ನೋವಿನ ಅನುಭವಕ್ಕೆ ನೇರವಾಗಿ ಒಳ್ಳಿಕೊಂಡವರಲ್ಲ. ಆದರೆ ಕನಕದಾಸರಿಗೆ ಈ ನೋವು ಸ್ವಂತ ಅನುಭವವೇ ಆಗಿತ್ತು. ಕುಲಜವೆನ್ನಿಸಿಕೊಂಡವರು ಸಮಾಜದ ಕೆಳವರ್ಗವನ್ನು ಕುರಿತು ತೋರಿಸುವ ತೀವ್ರ ತಿರಸ್ಕಾರ ಎಂಥ ನೋವಿನ ಸಂಗತಿ ಎಂಬುದು ಕನಕದಾಸರಿಗೆ ಸ್ವಾನುಭವದ ಸಂಗತಿಯಾಗಿತ್ತು. ಸಮಾಜದಲ್ಲಿ ಮೇಲ್ವರ್ಗಕ್ಕೆ ಸೇರಿದವರು ಕೆಳಗಿನ ಜನರನ್ನು ಹೀನಾಯವಾಗಿ ಕಾಣುವುದರ ವಿರುದ್ಧ ಕನಕದಾಸರು ತಮ್ಮ ಪ್ರತಿಭಟನೆಯನ್ನು ತಮ್ಮ ಅಣುಕುಕಾವ್ಯ 'ರಾಮಧಾನ್ಯ ಚರಿತ್ರೆ'ಯಲ್ಲಿ ಸಾಕಷ್ಟು ತೀವ್ರವಾಗಿಯೇ ಅಭಿವ್ಯಕ್ತಿಸಿದ್ದಾರೆ. ಈ ಕಾವ್ಯದಲ್ಲಿ ನಾವು ನೋಡುವ ರಾಗಿಯ ಪ್ರತಿಭಟನೆ ದಲಿತವರ್ಗದವರ ಪ್ರತಿಭಟನೆಯೇ ಆಗಿದೆ.

ತನ್ನ ಅನೇಕ ಕೀರ್ತನೆಗಳಲ್ಲೂ ಕನಕದಾಸರು 'ಕುಲ'ದ ಕಲ್ಪನೆಯನ್ನು ಕೆದಕುತ್ತಾರೆ. ಇದರ ಹಿಂದೆ ವೈಯಕ್ತಿಕ ನೋವಿನ ಅಂಶವಿರುವುದರ ಜೊತೆಗೆ ಸಾಮಾಜಿಕ ಸುಧಾರಣಾ ಪ್ರವೃತ್ತಿಯೂ ಕೆಲಸಮಾಡಿದೆ. 'ಕುಲ ಕುಲ ಕುಲವೆನ್ನುತಿಹರೊ । ಕುಲವಾವುದು ಸತ್ಯಜನರಿಗೆ ?' ಎಂಬ ಪ್ರಶ್ನೆಯಲ್ಲಿರುವ ಕಳಕಳಿ ಗಮನಾರ್ಹವಾದುದು. ತಾವರೆ ಕೆಸರಲ್ಲಿ ಹುಟ್ಟಿದರೂ ಪೂಜಾಯೋಗ್ಯವಾಗುತ್ತದೆ ; ಹಸುವಿನ ಕೆಚ್ಚಲಲ್ಲಿ ಬರುವ ಹಾಲನ್ನು

‘ಭೂಸುರ’ರೆನ್ನಿಸಿಕೊಂಡವರು ಪವಿತ್ರವೆಂದು ಭಾವಿಸಿ, ಉಪಯೋಗಿಸುತ್ತಾರೆ. ಅಷ್ಟು ಮಾತ್ರವಲ್ಲ, ಪರಾಶರ, ವಶಿಷ್ಠ, ನಾರದ ಮೊದಲಾದ ಪ್ರಸಿದ್ಧ ಋಷಿಗಳು ಹುಟ್ಟಿನಿಂದ ಬ್ರಾಹ್ಮಣರೇನಲ್ಲ–ಹೀಗೆ ಬೇರೆ ಬೇರೆ ಉದಾಹರಣೆಗಳ ಮೂಲಕ ಕನಕದಾಸರು ಮನುಷ್ಯನ ಪಾಲಿಗೆ ಶ್ರೇಷ್ಠತೆ ಬರುವುದು ಹುಟ್ಟಿದ ಕುಲದಿಂದಲ್ಲ, ಅಂತಃಸ್ಸತ್ವದಿಂದ, ಆಚಾರದಿಂದ ಎಂಬುದನ್ನು ಸಮರ್ಥಿಸುತ್ತಾರೆ. ಆತ್ಮ ನಾವಕುಲ, ಜೀವನಾವ ಕುಲ, ತತ್ವೇಂದ್ರಿಯಗಳ ಕುಲ ಪೇಳಿರಯ್ಯ ? –ಇದು ಕೇವಲ ಕನಕದಾಸರೊಬ್ಬರ ಪ್ರಶ್ನೆಯಲ್ಲ ; ‘ಮನುಷ್ಯ ಜಾತಿ ತಾನೊಂದೆ ವಲಂ’ ಎಂದು ಘೋಷಿಸಿದ ಆದಿಕವಿ ಪಂಪನಂಥವರೂ ಕರ್ಣನ ಬಾಯಲ್ಲಿ ಇಂಥದೇ ಮಾತನ್ನು ಆಡಿಸುವುದನ್ನು ನಾವು ಕಾಣಬಹುದು. ಆತ್ಮ, ಜೀವ, ಇಂದ್ರಿಯಗಳು ಕುಲದ ಕಲ್ಪನೆಗೆ ಅತೀತವಾದುವು, ಆದ್ದರಿಂದ ದೇಹಕ್ಕೆ ಮಾತ್ರ ಜಾತಿಯ ಮೇಲ್ಮೈ ಕೀಳ್ಮೆಗಳನ್ನು ಅಂಟಿಸುವುದು ಅನೈಸರ್ಗಿಕವಾಗುತ್ತದೆ. ಇನ್ನೊಂದು ಕೀರ್ತನೆಯಲ್ಲಿ ಕನಕದಾಸರು ಹಾಡುತ್ತಾರೆ– ‘ಯಾತರವನೆಂದುಸುರಲಿ, ಜಗನ್ನಾಥ ಮಾಡಿದೆ ಒಂದು ನರರೂಪವಯ್ಯ’ ; ಇಲ್ಲಿಯೂ ಕುಲದ ಕಲ್ಪನೆಯನ್ನೇ ಕುರಿತಾದ ನೋವಿದೆ. ಚಿಂತನೆಯೂ ಇದೆ. ತಾನು ದೇವರ ಮಗ ‘ಜಗನ್ನಾಥ ಮಾಡಿದ ಒಂದು ನರರೂಪ’ ಎಂದು ಹೇಳುವುದರ ಮೂಲಕ, ತನ್ನ ಜಾತಿ ಮಾನವ ಜಾತಿ, ಭಗವಂತನೇ ನನ್ನ ತಂದೆ ; ಹೀಗಾಗಿ ಹುಟ್ಟಿನ ಮೂಲಕ, ಕೀಳಾಗಲು ಸಾಧ್ಯವಿಲ್ಲ–ಎಂಬುದನ್ನು ಧ್ವನಿಪೂರ್ವಕವಾಗಿ ಅವರು ತೋರಿಸಿದ್ದಾರೆ. ‘ಈ ದೇಹದಲಿ ನೀ ನೆಲೆಸಿರಲು ಹೊಲೆಯುಂಟೇ ?’ ಎಂಬ ಮಾತೂ ಹರಿಭಕ್ತಿಸಾರದಲ್ಲಿ ಬರುತ್ತದೆ. ಭಗವಂತನ ವಾಸಸ್ಥಾನವಾದ ದೇಹ ಹುಟ್ಟಿನ ಕಾರಣಕ್ಕಾಗಿ ಕೀಳಾಗಲಾರದು ಎಂಬುದನ್ನು ಇದು ಸಮರ್ಥಿಸುತ್ತದೆ.

----

ಅಧ್ಯಾಯ – ೨

# ಕೀರ್ತನೆಗಳ ಉಗಮ, ವಿಕಾಸ ಮತ್ತು ಸ್ವರೂಪ

ಹರಿದಾಸರ ಕೀರ್ತನ ಸಾಹಿತ್ಯಕ್ಕೆ ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತಸಿದ್ಧಾಂತವೇ ಪ್ರೇರಣೆ ಮುಖ್ಯವಾಗಿದೆ. ಇವರು ವೈದಿಕ ಪರಂಪರೆಯನ್ನು ಒಪ್ಪಿಕೊಂಡು ಸಮಜದ ಮಧ್ಯದಲ್ಲಿ ಸಂಚರಿಸಿದರು. ವೇದ ಉಪನಿಷತ್ತುಗಳನ್ನು ತಿರುಳುಗನ್ನಡದಲ್ಲಿ ಪ್ರತಿಪಾದಿಸಿದರು. ಅಲ್ಲಿನ ಗಹನ ತತ್ವಗಳನ್ನು ಅಧ್ಯಾತ್ಮ ರಹಸ್ಯಗಳನ್ನು ಸರಳ, ಸುಲಭ, ರೀತಿಯಲ್ಲಿ ಜನ ಸಾಮಾನ್ಯರಿಗೆ ಅನಾವರಣಗೊಳಿಸಿದವರು ದಾಸರು.

ಈ ದಾಸ ಸಾಹಿತ್ಯವನ್ನು ಪಂಪ ಯುಗದಲ್ಲಿಯೇ ಅಚಲಾನಂದರ ಪದ, ಉಗಾಭೊಗಗಳಿಂದಲೇ ಆರಂಭವಾಯಿತೆಂಬ ಬೇಲೂರ ಕೇಶವದಾಸರ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪದೇ ಇದ್ದರೂ, ೧೨ನೆಯ ಶತಮಾನದಿಂದ ಇಲ್ಲಿಯವರೆಗೆ ದಾಸ ಸಾಹಿತ್ಯವು ಸತ್ವಯುತವಾಗಿಯೇ ಬೆಳೆದು ಬಂದಿದ್ದು ಮಾನವ ಧರ್ಮವನ್ನು ಜಾಗೃತಗೊಳಿಸುತ್ತ ಸಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

### ಕೀರ್ತನೆಗಳ ಉಗಮ:

ಜನಪ್ರಿಯತೆ, ಜನಸಮ್ಮುಖತೆ ದಾಸ ಸಾಹಿತ್ಯದ ಪ್ರಮುಖ ಲಕ್ಷಣಗಳು. ಕೀರ್ತನೆ–ಸುಳಾದಿ–ಉಗಾಭೋಗದಂತಹ ಕಾವ್ಯ ರೂಪಗಳ ಮೂಲಕ ಅಭಿವ್ಯಕ್ತಗೊಂಡ ದಾಸ ಸಾಹಿತ್ಯಕ್ಕೆ ಕರ್ನಾಟಕದಲ್ಲಿ ಬಹುದೊಡ್ಡ ಪರಂಪರೆಯಿದೆ ಇದನ್ನು ರಾ.ಸ್ವ.ಪಂಚಮುಖಿಯವರು ನಾಲ್ಕು ಘಟ್ಟಗಳನ್ನು ಪ್ರಸ್ಥಾಪಿಸಿದರು. ೧ನೆಯದು ಮಧ್ವಾಚಾರ್ಯರ ಹಾಗೂ ಅವರ ಶಿಷ್ಯರಾದ ನರಹರಿತೀರ್ಥರದು, ೨ನೆಯದು ಕೃಷ್ಣದೇವರಾಯನ ಕಾಲದಲ್ಲಿ ಪುರಂದರದಾಸರು, ಕನಕದಾಸರು, ವ್ಯಾಸರಾಯರ ಗುರುತ್ವದಲ್ಲಿ ಅಭಿವ್ಯಕ್ತಿಗೊಳಿಸಿದ್ದು, ೩ನೆಯದು ವಿಜಯದಾಸರು ಮುಂತಾದವರು. ೪ನೆಯದು ಆಧುನಿಕ ಸಂದರ್ಭ ಎನ್ನಲಾಗಿದೆ. ಮೊದಲ ಘಟ್ಟವು ದಾಸ ಸಾಹಿತ್ಯದ ಶ್ರೀಮಂತ ಕಾಲ. ದಾಸರು ಬರೆದಂತೆ ಬದುಕಿದರು. ನುಡಿದಂತೆ ನಡೆದರು. ಮೊದಲನೆಯ ಘಟ್ಟದಲ್ಲಿ ಕುರುಬ ಜನಾಂಗದಿಂದ ಬಂದ (ಬಡೇಸಾಬ) ರಾಮದಾಸರು ದಾಸ

ಸಾಹಿತ್ಯದ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಬಹುಮುಖ್ಯ ಆಕರಗಳಾಗುತ್ತಾರೆ. ಕನಕದಾಸರು ಇಡೀ ದಾಸ ಸಾಹಿತ್ಯ ಚರಿತ್ರೆಯಲ್ಲಿಯೇ ಬಹುವಿಶಿಷ್ಟವಾಗಿ ಕಾಣುತ್ತಾರೆ. ಇವರು ಕೀರ್ತನಕಾರರಾಗಿರುವಂತೆಯೇ ಕನ್ನಡದ ಮಹತ್ತ್ವದ ಕವಿಯೂ ಆಗಿದ್ದಾರೆ. ಇವರ ರಾಮಧಾನ್ಯ ಚರಿತೆಯಂತಹ ಕಾವ್ಯ ಜಾಗತೀಕರಣದ ಈ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ.

ಈ ಸಾಹಿತ್ಯವನ್ನು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೋಗ್ಲಿಂಗ್‌ರು ಪ್ರಥಮ ಬಾರಿಗೆ ಸಂಗ್ರಹಿಸಿ ಪ್ರಕಟಿಸಿದರು. ಈ ಸಂದರ್ಭದಲ್ಲಿ ಇವರು ನಾಲ್ಕು ನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿ ಒಂದು ನೂರು ಪದಗಳನ್ನು ಆಯ್ದುಕೊಂಡು **"ದಾಸರ ಪದಗಳು"** ಎಂಬ ಹೆಸರಿನಿಂದ ಕ್ರಿ.ಶ. ೧೮೫೦ ರಲ್ಲಿ ಪ್ರಕಟಿಸಿದರು. ಅಲ್ಲಿಂದಲೇ ಪ್ರಕಟಣೆ ಪ್ರಾರಂಭವಾಗಿ ಇಲ್ಲಿಯವರೆಗೆ ದಾಸ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅನೇಕ ಸಂಗ್ರಹಗಳು, ಸಂಕಲನಗಳು ಬೇರೆ ಬೇರೆ ಆವೃತ್ತಿಗಳು ಪ್ರಕಟವಾಗಿವೆ.

ಮುಂದೆ ಕ್ರಿ.ಶ. ೧೮೭೩ ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ **"ಹರಿಭಜನೆ ಕೀರ್ತನೆ"** ಎಂಬ ಸಂಗ್ರಹ ಪ್ರಕಟವಾಯಿತು. ಕ್ರಿ.ಶ. ೧೮೯೦ ರ ದಶಕದಲ್ಲಿ ಬೆಳಗಾವಿಯ ಅಬಾಜಿ ರಾಮಚಂದ್ರ ಸಾವಂತ ಅವರು ದೇವನಾಗರಿ ಲಿಪಿಯಲ್ಲಿ **"ದಾಸರ ಪದಗಳ ಸಂಗ್ರಹವು"** ಎಂಬ ಹೆಸರಿನಲ್ಲಿ ಎರಡು ಭಾಗಗಳಲ್ಲಿ ದಾಸರ ಪದಗಳನ್ನು ಸಂಕಲಿಸಿ ಪ್ರಕಟಿಸಿದರು. ಈ ಸಂದರ್ಭದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ಕ್ರಿ.ಶ. ೧೮೯೪ ರಲ್ಲಿ **"ಪುರಂದರದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು"** ಎಂಬ ಪುಸ್ತಕವನ್ನು ತೆಲುಗುವಿನಲ್ಲಿ ಮುದ್ರಿಸಿದ್ದು ಗಮನಾರ್ಹವಾದುದಾಗಿದೆ. ಕ್ರಿ.ಶ. ೧೯೧೪ ರಲ್ಲಿ ಉಡುಪಿಯ ಪಾವಂಜೆ ಗುರುರಾಯರು **"ಉದಯರಂಗವು"** ಎಂಬ ಸಂಗ್ರಹವನ್ನು ಪ್ರಕಟಿಸಿದರು. ಲಿಂಗಸೂಗೂರಿನ ಗೊರೆಬಾಳ- ಹಣಮಂತರಾಯರು, ವರದೇಂದ್ರ ಸಾಹಿತ್ಯ ಮಾಲೆಯನ್ನು ಪ್ರಾರಂಭಿಸಿ ಪ್ರಮುಖ ಕೃತಿಗಳನ್ನು ಹೊರತಂದರು. ಇದೇ ರೀತಿ ಧಾರವಾಡದ ಕಡೆಗೆ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ, ಬೆಟಗೇರಿ ಕೃಷ್ಣಶರ್ಮರು ಹರಿದಾಸರ ಕೃತಿಗಳನ್ನು ಪ್ರಕಟಿಸಿರುವರು. ನಂತರ ಕರ್ನಾಟಕ ಸರಕಾರ ದಾಸ ಸಾಹಿತ್ಯವನ್ನು ಸಂಗ್ರಹಿಸಿ "ಸಮಗ್ರ ದಾಸವಾಙ್ಞಯ ಬೆಳಕು ಚಲ್ಲಿದೆ".

ನವವಸಾಹತುಶಾಹಿ ಆಕ್ರಮಣದ ಈ ಸಂದರ್ಭದಲ್ಲಿ ನಮ್ಮ ಸಾಂಸ್ಕೃತಿಕ ನೆಲೆಗಳನ್ನು ಉಳಿಸಿಕೊಳ್ಳಬೇಕಾದುದು ಅತ್ಯವಶ್ಯಕವಾಗಿದೆ. ದಾಸ ಸಾಹಿತ್ಯ–ತಾಳ್ಮೆ–ಸಹನೆ–ಪ್ರೀತಿ–ವಾತ್ಸಲ್ಯ–ಪರೋಪಕಾರ ತ್ಯಾಗದಂತಹ ಮೌಲ್ಯಗಳನ್ನು ಸ್ಥಾಪಿಸಿದ ಭಕ್ತಿಪಂಥಗಳು, ಜಾಗತೀಕರಣಕ್ಕೆ ಹಾಗೂ ಪಾಶ್ಚಾತ್ಯ ಸಂಸ್ಕೃತಿಗೆ ಪರ್ಯಾಯ ಶಕ್ತಿಗಳಾಗಿ ಬೆಳೆಯುವ ಸಾಧ್ಯತೆಗಳನ್ನು ಕಾಣಬಹುದಾಗಿದೆ.

**"ತಲ್ಲಣಿಸದಿರು ಕಂಡ್ಯ ತಾಳು ಮನವೆ"** ಎನ್ನುವ ಕನಕದಾಸರ ನುಡಿ, **"ಈಸಬೇಕು ಇದ್ದು ಜಯಿಸಬೇಕು"** ಎನ್ನುವ ಪುರಂದರದಾಸರ ಮಾತು, ನಮ್ಮಲ್ಲಿ ಸಹನೆಯನ್ನು ಬೆಳೆಸಿ, ಆತ್ಮವಿಶ್ವಾಸವನ್ನು ಹುಟ್ಟಿಸುತ್ತವೆ. **"ಕೆರೆಯ ನೀರನ್ನು ಕೆರೆಗೆ ಚೆಲ್ಲಿ"** ಎನ್ನುವ ಕೀರ್ತನೆಯಲ್ಲಡಗಿರುವ

ತೀವ್ರತೆಯಲ್ಲಿ ಸಾಮಾಜಿಕ ಕಾಳಜಿ ಗಮನಿಸುವಂತಹದ್ದಾಗಿದೆ. **"ತಾಳುವಿಕೆಗಿಂತ ತಂಪು ಇಲ್ಲ"** ಎನ್ನುವ ವಾದಿರಾಜರು, "ಸತ್ಯದ ನಡೆ ಹಿಡಿರೋ ಮನುಜರ" ಎನ್ನುವ ಮಹಪತಿದಾಸರು "ಏನಾದರೇನು ಜ್ಞಾನವಿಲ್ಲದೆ" ಎಂದು ಹೇಳುವ ವಿಜಯದಾಸರು ಬದುಕಿನ ಸಾಧ್ಯತೆಗಳನ್ನು ಹೆಚ್ಚಿಸುವವರಾಗಿದ್ದಾರೆ. ಈ ಸಾಹಿತ್ಯದಲ್ಲಿ ನರಹರಿತೀರ್ಥರು, ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ರಾಘವೇಂದ್ರತೀರ್ಥರು, ಮಹಿಪತಿದಾಸರು, ಪ್ರಸನ್ನವೆಂಕಟ ದಾಸರು, ವಿಜಯ ದಾಸರು, ಗಲಗಲಿ ಅವ್ವನವರು, ಗೋಪಾಲ ದಾಸರು, ಜಗನ್ನಾಥ ದಾಸರು, ಮೋಹನ ದಾಸರು, ಹೆಳವನ ಕಟ್ಟೆ ಗಿರಿಯಮ್ಮ, ಯೋಗೇಂದ್ರ ದಾಸರು, ರಾಮ ದಾಸರು, ರಂಗದಾಸರು, ಹರಪನ ಹಳ್ಳಿ ಭೀಮವ್ವ, ಅಕ್ಕಿಹಾಳ ಗೋವಿಂದ ದಾಸರು, ವಿದ್ಯಾ ಪ್ರಸನ್ನತೀರ್ಥರು ಮುಂತಾದವರು ಭಕ್ತಿ–ಆಧ್ಯಾತ್ಮದಂತಹ ವಿಷಯವನ್ನು ಸುಂದರವಾದ ಕಾವ್ಯದ ಮೂಲಕ ಈ ಕೀರ್ತನಕಾರರು ಕಟ್ಟಿಕೊಟ್ಟಿದ್ದಾರೆ.

## ಕೀರ್ತನೆಗಳ ವಿಕಾಸ ಮತ್ತು ಸ್ವರೂಪ:

ಕನ್ನಡ ಸಾಹಿತ್ಯ ಸಂದರ್ಭವಾದ ವೈಷ್ಣವ ಭಕ್ತಿಯು ಪ್ರವಹಿಸುವ ಕಾಲದಲ್ಲಿ ಹರಿದಾಸರ ಸುಳಾದಿ ಉಗಾಭೋಗಾದಿಗಳನ್ನುಳಿದ ಬಿಡಿರಚನೆಗಳ ಸಮೂಹಕ್ಕೆ ಕೀರ್ತನೆ ಎಂಬ ಅಭಿದಾನ ನೀಡಲಾಗಿದೆ. ಕೀರ್ತನೆ ಎಂಬುದಕ್ಕೆ ಭಾಗವತದಲ್ಲಿ ಸ್ತುತಿ, ಸ್ತೋತ್ರ ಎಂಬರ್ಥಗಳಿವೆ. 'ಕೀರ್ತನೆ' ಎಂಬುದು ಕನ್ನಡ ಸಂವಾದಿ ಪದ. ವೀರಶೈವ ಧರ್ಮದ ಉತ್ಕರ್ಷದ ಕಾಲದಲ್ಲಿ ಹೇಗೆ ವಚನಗಳು ಸೃಷ್ಟಿಯಾದವೋ ಅದೆ ರೀತಿ ಭಾಗವತ ಪರಂಪರೆಯ ಉತ್ಕರ್ಷದ ಸಂದರ್ಭದಲ್ಲಿ ಕೀರ್ತನೆಗಳು ಹುಟ್ಟಿಕೊಂಡಿವೆ. ಕನ್ನಡ ನಾಡಿನಲ್ಲಿ ರಾಮಾನುಜರ ಮತ್ತು ಮಾಧ್ವರ ಪ್ರಭಾವ ಹಾಗೂ ಪ್ರಾಬಲ್ಯದಿಂದ ಎರಡು ವೈಷ್ಣವ ಪಂಥಗಳನ್ನು ಗುರ್ತಿಸಬಹುದು. ಹದಿಮೂರನೇ ಶತಮಾನದ ಕೊನೆಯ ಭಾಗದಲ್ಲಿದ್ದ ನರಹರಿತೀರ್ಥರು ಈ ಪರಂಪರೆಯ ಆದ್ಯ ಪ್ರವರ್ತಕರು. ನಂತರ ಶ್ರೀಪಾದರಾಯ, ವ್ಯಾಸರಾಯ, ಪುರಂದರದಾಸರ, ಕನಕದಾಸರ ಕೀರ್ತನೆಗಳಲ್ಲಿ 'ದಾಸ ವಾಙ್ಮಯ'ವು ಉತ್ತುಂಗ ಶಿಖರವನ್ನು ಮುಟ್ಟಿತು. ತುರುವಾಯ ವಾದಿರಾಜ, ವಿಜಯದಾಸ, ಜಗನ್ನಾಥದಾಸ, ಪ್ರಸನ್ನ ವೆಂಕಟದಾಸ ಮೊದಲಾದವರು ಈ ಪರಂಪರೆ ಮುಂದುವರೆಸಿದರು. ಆದಿ ದೈವವನ್ನು ಕುರಿತು ದಾಸರು ಕಟ್ಟಿದ 'ಹಾಡುಗಬ್ಬವೇ' ಕೀರ್ತನೆಗಳು, ಕೀರ್ತನೆಯ ಲಕ್ಷಣಕ್ಕೆ ಹೊಂದಿಕೊಳ್ಳುವಂಥ ರಚನೆಗಳು ೧೨ನೇ ಶತಮಾನದ ಶಿವಶರಣರಲ್ಲಿ ಕಾಣುತ್ತದೆ.

ವಚನಕಾರರ ಕಾಲದಲ್ಲಿ ಅಲ್ಲೊಂದು ಇಲ್ಲೊಂದು ಎಂಬಂತೆ ಶಿವಗೀತೆಗಳಾಗಿ ಕೀರ್ತನೆಗಳ ರಚನೆ ಆದರೂ ಅದೊಂದು ಮಹಾಪೂರದಂತೆ ಹೆಬ್ಬೊಳೆಯಾಗಿ ಹರಿದದ್ದು ೧೫–

೧೬ನೇ ಶತಮಾನದಲ್ಲಿ. ಹರಿಕೀರ್ತನವು ಕನ್ನಡಿಗರ ಮನೆ ಮನೆಗಳಲ್ಲಿ 'ದೇವರ ನಾಮ'ವಾಗಿ ನಲಿಯುವಂತೆ ಕೀರ್ತನೆಗಳನ್ನು ಅಪೂರ್ವ ಸತ್ತ್ವಭರಿತವಾಗಿ ಹರಿದಾಸರು ರಚಿಸಿಕೊಟ್ಟರು. ತಮ್ಮ ಧರ್ಮ ಪ್ರಚಾರದೊಂದಿಗೆ ಸಮಾಜ ಸುಧಾರಣೆ, ಸದಾಚಾರ ಸನ್ಮತಿಗಳನ್ನು ಹರಡುವ ಅತ್ಯುತ್ತಮ ಸಾಧನವಾಗಿ ಅವರು ಕೀರ್ತನೆಗಳನ್ನು ಶಕ್ತಿಯುತವಾಗಿ ಬಳಸಿಕೊಂಡರು.

ಐತಿಹಾಸಿಕ ಶ್ರೀನರಹರಿತೀರ್ಥರನ್ನು ದಾಸಕೂಟದ ಮೂಲ ಪುರುಷರನ್ನಾಗಿ ಗುರುತಿಸಲಾಗುತ್ತದೆ. ಇವರು ೧೩ನೇ ಶತಮಾನದ ಕೊನೆಯ ಭಾಗದಲ್ಲಿದ್ದವರು. ಆದರೂ ಕನ್ನಡದಲ್ಲಿ ಧಾರ್ಮಿಕವಾಙ್ಮಯವನ್ನು ರಚಿಸಬೇಕೋ ಬೇಡವೋ ಎಂಬ ಬಗ್ಗೆ ಬ್ರಾಹ್ಮಣ ಕವಿಗಳ ಮನೋವೃತ್ತಿ ೧೫ನೇ ಶತಮಾನದವರೆಗೆ ದೃಢವಾದಂತೆ ಕಂಡುಬರುವುದಿಲ್ಲ. ೧೫ನೇ ಶತಮಾನದ ಶ್ರೀ ಪಾದರಾಯರು ಈ ಪರಂಪರೆಗೆ ಮೊದಲಿಗರಾದರು. ಬಹುಪಾಲು ಕೀರ್ತನಕಾರರು ಇವರನ್ನೇ ದಾಸಕೂಟದ ಹಿರಿಯರೆಂದು ಸ್ಮರಿಸುತ್ತಾರೆ.

"ಶ್ರೀಪಾದರಾಜರು ತಮಿಳುನಾಡಿನ ಶ್ರೀರಂಗದಲ್ಲಿದ್ದವರು. ಶ್ರೀರಂಗವು ರಾಮಾನುಜ ಸಂಪ್ರದಾಯದ ವೈಷ್ಣವರಿಗೆ ಭೂವೈಕುಂಠ. ಆಳ್ವಾರರ ಪಾಶುರಗಳ ಸಂಕಲನ ನಡೆದದ್ದು ಇಲ್ಲಿಯೇ ಪ್ರಚಾರ ನಡೆದದ್ದು ಇಲ್ಲಿಯೇ" ಈ ಪಾಶುರಗಳ ಪ್ರಭಾವ ಶ್ರೀಪಾದರಾಜರ ಮೇಲೆ ಆಗಿರಬಹುದು. ಇದೇ ಸಮಯದಲ್ಲಿ ತಮಿಳುನಾಡಿನಲ್ಲಿ ಸಾಹಿತ್ಯ ಪ್ರಧಾನವಾದ 'ಇಯರ್' ಎಂಬ ಪ್ರಕಾರವೂ, ಗೇಯ ಪ್ರಧಾನವಾದ 'ಇಶೈ' ಎಂಬ ಪ್ರಕಾರವೂ ಬಳಕೆಗೆ ಬಂದವು. ಈ 'ಇಶೈ' ಎಂಬ ಪ್ರಕಾರವೂ ಬಳಕೆಗೆ ಬಂದವು. ಈ 'ಇಶೈ' ಎಂಬ ಅಂಶಗಣಗಳು ಬರುತ್ತವೆ. ಬಹುಪಾಲು ಕೀರ್ತನೆಗಳು ರಾಗ, ತಾಳ ನಿರ್ದೇಶನದೊಂದಿಗೆ ದೊರೆಯುತ್ತವೆ. ಕರ್ನಾಟಕ ಸಂಗೀತಕ್ಕೆ ಹಾಗೂ ಒಟ್ಟಾರೆ ಸಂಗೀತ ಪ್ರಪಂಚಕ್ಕೆ ಹರಿದಾಸರ ಕೊಡುಗೆ ಅನುಪಮವಾದದ್ದು.

ರೂಪಾಂಶದಂತೆಯೇ ವಸ್ತುವಿನ ದೃಷ್ಟಿಯಿಂದ ಹಾಗೂ ಹೊತ್ತು ತರುವ ಭಾವದ ದೃಷ್ಟಿಯಿಂದ ಈ ಕೀರ್ತನೆಗಳು ಅನೇಕ ಬಗೆಯ ವಿಭಜನೆ ಅನುವು ಮಾಡಿಕೊಡುವಂತಿವೆ.

ದಾಸರು ಮಾಧ್ವಮತದ ತತ್ತ್ವಗಳನ್ನು ದೃಢವಾಗಿ ನಂಬಿ ಅನುಸರಿಸುವವರಾದ ಕಾರಣ ತತ್ತ್ವಗಳನ್ನು ತಿಳಿಗನ್ನಡದಲ್ಲಿ ಹಿಡಿದಿರಿಸುವ ಕಾರ್ಯವನ್ನು ಮಾಡುತ್ತಾರೆ. ಈ ಕಾರಣದಿಂದ ಹರಿಸರ್ವೋತ್ತಮತ್ವ, ಹರಿನಾಮ ಮಹತ್ವ ಹರಿದಾಸರುಗಳ ಹಿರಿಮೆ-ಸ್ತುತಿ, ಅವತಾರತ್ರಯ, ದ್ವೈತತತ್ತ್ವ, ದ್ವೈತಸಿದ್ಧಾಂತಸಾರ ಮುಂತಾದ ಪ್ರಮೇಯಗಳನ್ನು ಪ್ರತಿಪಾದನೆ ಮಾಡುವ ಕೀರ್ತನೆಗಳನ್ನು ರಚಿಸಿರುತ್ತಾರೆ. ದಶಾವತಾರಸ್ತುತಿ, ದೈವಸ್ತುತಿ, ಯತಿಸ್ತುತಿ, ಹರಿದಾಸ ಸ್ತುತಿಗಳನ್ನು ಮಾಡಿರುತ್ತಾರೆ. ದಾಸರು ಭಾಗವತ ಸಂಪ್ರದಾಯದಂತೆ ಅನೇಕ ತೀರ್ಥ ಕ್ಷೇತ್ರಗಳಿಗೆ ಹೋಗಿ ದೇವರ ದರ್ಶನ ಮಾಡುವುದು ರೂಢಿ. ಹೀಗಾಗಿ ಆಯಾ ಕ್ಷೇತ್ರದ ಮುಖ್ಯ ದೇವರನ್ನು

ಹಾಡಿ ಹೊಗಳಿ ಕೀರ್ತನೆ ರಚಿಸಿರುತ್ತಾರೆ. ಭಗವಂತನ ಸಾಕಾರ ಸೌಂದರ್ಯವನ್ನು ಕಂಡು ಮುಗ್ಧರಾಗುವ ಭಕ್ತಿ ತನ್ಮಯತೆಯಲ್ಲಿ ತಾದಾತ್ಮ್ಯವನ್ನು ಕಾಣುವ ಈ ದಾಸರು ಭಗವಂತನನ್ನು ವಿವಿಧ ಭಾವಗಳಲ್ಲಿ ವಿವಿಧ ನಿಲುವುಗಳಲ್ಲಿ ಆರಾಧಿಸಿ ಸ್ತುತಿಸಿ ಕೀರ್ತನೆ ರಚಿಸಿರುತ್ತಾರೆ. ಒಮ್ಮೊಮ್ಮೆ ಅನನ್ಯ ಶರಣರಾಗಿ ದೀನರಾಗಿ ದಾಸರಾಗಿ ದಾಸಾಸ್ಯರ ದಾಸರಾಗಿ ಹಾಡುತ್ತಾರೆ. ಒಮ್ಮೊಮ್ಮೆ 'ಎನಗೂ ಆಣೆ ರಂಗ ನಿನಗೂ ಆಣೆ' ಎಂದು ಸ್ನೇಹಿತರಂತೆ ಸಲುಗೆ ತೋರುತ್ತಾರೆ. ಒಮ್ಮೊಮ್ಮೆ ಅತಿಮಧುರ ಭಾವದಿಂದ ಗೋಪಿಕಾ ಸ್ತ್ರೀಯರಂತೆ ಹರಿಸ್ವಾಮಿಯನ್ನು ನೆನೆದು ಪುಳಕ ತೋರುತ್ತಾರೆ. ಹರಿವಿದಾವತೆಗೆ ವಿರಹವೇದನೆ ತೋರುತ್ತಾರೆ. ಹರಿಲೀಲಾವಿನೋದಕ್ಕೆ ಒಳಗಾದ ಮುಗುದೆಯರ ಭಾವವನ್ನು ಕೀರ್ತನೆಗಳಲ್ಲಿ ತೋರುತ್ತಾರೆ. ಇದೇ ದಾಸರು ಯಶೋಧೆಯಂತೆ ಹರಿಯಲ್ಲಿ ವಾತ್ಸಲ್ಯ ತೋರಿ. 'ಗುಮ್ಮನ ಕರೆಯದಿರೆ' 'ಅಮ್ಮಾ ನಿಮ್ಮ ಮನೆಗಳಲ್ಲಿ ರಂಗನ ಕಾಣಿರೇನೆ' 'ಪೋಗಾದಿರೆಲೋರಂಗ' ಇವೆಲ್ಲಾ ಇಂತಹ ಪ್ರಸಿದ್ಧ ಕೀರ್ತನೆಗಳು. ಒಂದೊಂದು ಮನೆಯ ಹಸುಕಂದಯ್ಯಗಳಲ್ಲಿ ಮುದ್ದುಕೃಷ್ಣ ಸಾಕಾರವಾಗುವಂತೆ ಸಾಮಾನ್ಯ ತಾಯೊಬ್ಬಳು ಲೋಕೋತ್ತರ ಮಾತೆ ಯಶೋದೆಯ ಸುಂದರ ಅನುಭವಗಳನ್ನು ಪಾಲ್ಗೊಳ್ಳುವಂತೆ ಕೀರ್ತನೆಗಳು ಮೂಡುತ್ತವೆ. ಶಾಸ್ತ್ರಪ್ರಮೇಯದ ಕೃತಿಗಳಿಗಿಂತಲೂ ಇಂತಹ ಕೃತಿಗಳೇ ಕೀರ್ತನೆಯನ್ನು ಜನಸಾಮಾನ್ಯರ ಮನದಾಳಕ್ಕೆ ಇಳಿಸಿದವಾಗಿವೆ.

ವೈಯಕ್ತಿಕ ಆರ್ತತೆ, ಅನುಭಾವಗಳೂ ದಾಸರ ಕೀರ್ತನೆಗಳಾಗಿ ಹೊಮ್ಮದೇ ಇಲ್ಲ. ಆತ್ಮ ನವೇದನೆ ಅಪರೋಕ್ಷಾನುಭಾವಗಳೂ ಕೀರ್ತನೆಗಳಾಗಿ ಹೊರಹೊಮ್ಮಿದೆ.

**'ಸಾಕು ಸಾಕು ಮನುಜ ಸೇವೆಯು ರಂಗಯ್ಯ'**

**'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ' ಎಂಬ ಕೀತ್ನೆಗಳು**

**'ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ'**

**ನಿಂದೆಯಲಿ ನೊಂದೆನ್ನೈ ನೀರಜಾಕ್ಷ'** –

ಎಂಬ ಮಾತು, ಗಿಳಿಯು ಪಂಜರದೊಳಿಲ್ಲ ಎಂಬ ಸಾವಿನ ಪ್ರತಿಮೆ ಇವುಗಳಲ್ಲಿನ ಆತ್ಮ ನಿವೇದನೆ ಆರ್ತತೆ ಮನಸೆಳೆಯುತ್ತವೆ. 'ಗಿಳಿಯು ಪಂಜರದೊಳಿಲ್ಲ' ಎಂಬ ಕೀರ್ತನೆಯನ್ನು ಪುರಂದರದಾಸರು ತಮ್ಮ ಮಗಳೊಬ್ಬಳು ತೀರಿಕೊಂಡಾಗ ಹಾಡಿದರೆಂದು ಹೇಳುವುದುಂಟು. ಇದೇ ರೀತಿ 'ಬಾಗಿಲನು ತೆರೆದು' ಎಂಬ ಕೀರ್ತನೆಯನ್ನು ಉಡುಪಿಯಲ್ಲಿ ಕೃಷ್ಣದರ್ಶನವಾಗದಿದ್ದಾಗ ಕನಕದಾಸರು ಹಾಡಿದರೆಂಬ ಮಾತಿದೆ.

ಹಾಗೆಯೇ ಭಕ್ತಿ ಅನುಭಾವದಲ್ಲಿ ತಾವು ಕಂಡು ಉಂಡ ಸುಖವನ್ನೂ ದಾಸರು ಹಾಡಿ ಕುಣಿದಿರುತ್ತಾರೆ. 'ಸ್ವಾನಂದದ ಸುಖ ಏನೆಂದ್ಹೇಳಲಿ ಕೌತುಕ. ಒಡೆದು ಹೇಳುವುದಲ್ಲ ಹಿಡಿದು ತಾ ಕೊಡಲಿಕ್ಕಿಲ್ಲ'. ಎಂದು ಒಬ್ಬರು ಹಾಡಿದರೆ ಮತ್ತೊಬ್ಬರು 'ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು ; ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು' ಎಂದು ಗೆಜ್ಜೆ ಕಟ್ಟಿ ಕುಣಿದಿದ್ದಾರೆ.

ಹರಿದಾಸರು ಬದುಕನ್ನು ದೂರನಿಂತು ನೋಡಿದವರಲ್ಲ. ದಂಡಿಗೆ ಬೆತ್ತ ಹಿಡಿದರೂ ಸಂಸಾರದಲ್ಲದ್ದೇ ಊಂಛ ವೃತ್ತಿಯನ್ನು ಆಶ್ರಯಿಸಿ ಭಗವಂತನ ಹಿರಿಮೆ ಅರಿತು ಬಾಳಿದವರು. ಜನರ ನಡುವೆಯೇ ಬಾಳಿ ಅವರ ನಡುವೆಯೇ ಓಡಾಡಿ ಅದರ ಬದುಕನ್ನು ನಿಕಟವಾಗಿ ಕಂಡವರು. ಸ್ವಾಭಾವಿಕವಾಗಿಯೇ ಸದಾಚಾರದ ಉಪದೇಶವನ್ನು ನೀಡಿ ಸಾಮಾಜಿಕ ಢಂಬಾಚಾರ ಕೀಳು ದೈವಗಳ ಆರಾಧನೆ ಮುಂತಾದವನ್ನು ಟೀಕಿಸಿ ಲೋಕದ ಡೊಂಕನ್ನು ತಿದ್ದಿರುತ್ತಾರೆ.

'ಮುತ್ತು ಬಂದಿದೆ ಕೇರಿಗೆ' 'ಅನುಭವದಡುಗೆ ಮಾಡಿ' 'ಕಲ್ಲುಸಕ್ಕರೆ ಕೊಳ್ಳಿರೋ' 'ಭಜಿಸಿ ಬದುಕಲೊ ಮನುಜ' ಮುಂತಾದ ಕೀರ್ತನೆಗಳಲ್ಲಿ ಜನರ ಮನವನ್ನು ಹರಿಭಕ್ತಿಗೆ ಒಲಿಸುವ ಕಾರ್ಯವಿದೆ. 'ಗುರುವಿನ ಗುಲಾಮನಾಗುವ ತನಕ' 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ' ಎಂಬಂತಹ ಕೀರ್ತನೆಗಳಲ್ಲಿ ಉಜ್ವಲ ಜೀವನ ದರ್ಶನವಿದೆ, ಮೃದುವಾಗಿ ಮನವೊಲಿಸಿ ಜೀವನ ತತ್ವ ಹೇಳುವ ಈ ದಾಸರು ಕಟುವಾಗಿ ಸಮಾಜದ ವಿಮರ್ಶೆ ಮಾಡಬಲ್ಲರು. ವಾಗ್ದಂಡನೆಯಿಂದ, ದಾರಿತಪ್ಪಿದವರನ್ನು ಸರಿದಾರಿಗೆ ತರ ಬಲ್ಲರು 'ನೋಡಿ ಮರುಳಾಗದಿರು ಪರಸತಿಯರಾ' 'ಕದವ ಮುಚ್ಚಿದಳಿದಕೋ' 'ಕುಲ ಕುಲವೆಂದು ಹೊಡೆದಾಡದಿರಿ' 'ಹ್ಯಾಗೆ ನೀ ದಾಸನಾದೆ ಪ್ರಾಣಿ' 'ಉದರ ವೈರಾಗ್ಯವಿದು' ಮುಂತಾದ ರಚನೆಗಳಲ್ಲಿ ಸಮಾಜದ ಕಟು ವಿಡಂಬನೆ ಇದೆ.

ಬದುಕಿನಲ್ಲಿ ಮೈಗೂಡಿಸಿಕೊಳ್ಳಬೇಕಾದ ಅನೇಕ ಸಾರ್ವತ್ರಿಕ ಸಂದೇಶಗಳನ್ನು ದಾಸರು ಬಿತ್ತಿದ್ದಾರೆ. 'ಧರ್ಮವೇ ಜಯವೆಂಬ ದಿವ್ಯಮಂತ್ರ' 'ಸತ್ಯವೆಂಬುದೇ ಸ್ನಾನ ಉಪವಾಸ, ಜಪನೇಮ' 'ಮಾನವ ಜನ್ಮ ದೊಡ್ಡದು' 'ಈಸಬೇಕು ಇದ್ದು ಜೈಸಬೇಕು' 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಮುಂತಾದ ಕೀರ್ತನೆಗಳು ಬದುಕಿನ ಮಹತ್ವವನ್ನು ತಿಳಿಸಿ ಹೇಳುವುದೇ ಅಲ್ಲದೆ ಕಷ್ಟ ಬಂದಾಗ ಅವನ್ನು ತಾಳಿಕೊಳ್ಳುವ ಶಕ್ತಿಯನ್ನು ನೀಡಬಲ್ಲವಾಗಿವೆ.

ಕನ್ನಡದ ಹರಿದಾಸರು ಮತ್ತು ಶಿವಶರಣ ವಚನಕಾರರು ಈ ಸಾಹಿತ್ಯದ ರೂಪವನ್ನು ಸೃಷ್ಟಿಸಿ ಬೆಳೆಸಿದರು. ಹರಿದಾಸ ಸಾಹಿತ್ಯದ ಉಗಾಭೋಗ, ಸುಳಾದಿಗಳನ್ನು ಬಿಟ್ಟಂತೆ ಮಿಕ್ಕ ಸಾಹಿತ್ಯಕ್ಕೆ ಕೀರ್ತನೆ ಎಂದು ಹೆಸರು. ಭಗವಂತನ ಸ್ತುತಿ, ಹೊಗಳುವಿಕೆ ಈ ಮಾತಿನ ಅರ್ಥ.

ಒಂಭತ್ತು ವಿಧದ ಭಕ್ತಿಗಳಲ್ಲಿ 'ಕೀರ್ತನೆ' ಎಂಬುದೂ ಒಂದು. ಸ್ವರೂಪದ ದೃಷ್ಟಿಯಿಂದ ಇದರಲ್ಲಿ ಪಲ್ಲವಿ, ಅನುಪಲ್ಲವಿ, ನುಡಿಗಳು ಎಂಬ ಮೂರು ಹಂತಗಳು. ನಂತರ ನಾಲ್ಕು ಪಾದಗಳ ಕೆಲವು ಪದ್ಯಗಳು ಇರುವುದು ಇದರ ರೂಪವಾಗಿದೆ. ಪಲ್ಲವಿಯಲ್ಲಿ ಹರಿದಾಸರು ಕಂಡ ಸತ್ಯದ ದರ್ಶನವಿರುತ್ತದೆ. ಅನುಪಲ್ಲವಿಯಲ್ಲಿ ಅದು ಪುಷ್ಟಿ ಪಡೆದು, ನುಡಿಗಳಲ್ಲಿ ಪಲ್ಲವಿಗೆ ಸೂಕ್ತವಾದ ಉದಾಹರಣೆಗಳನ್ನು ನೀಡುತ್ತಾರೆ. ಈ ಉದಾಹರಣೆ ಸಾಮಾನ್ಯವಾಗಿ ವೈಷ್ಣವ ಸಾಹಿತ್ಯದಿಂದ, ದಿನನಿತ್ಯದ ಸಂಕಟ, ಕಾತರಗಳಿಂದ ಹುಟ್ಟಿರುತ್ತದೆ. ಕೀರ್ತನೆಯ ಕೇಂದ್ರವಸ್ತು ದೈವ-ಧರ್ಮದಲ್ಲಿ ಭಕ್ತಿ. ಭಕ್ತ ಮತ್ತು ಸಂತ ಕವಿಗೆ ಕೀರ್ತನೆ ಒಂದು ಸೇತುವೆ. ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಕೀರ್ತನೆ ಸಹಾಯ ಮಾಡಿದೆ.

ಕೀರ್ತನ ಸಾಹಿತ್ಯದಲ್ಲಿ ಎರಡು ಉಜ್ವಲ ತಾರೆಗಳೆಂದರೆ ಪುರಂದರದಾಸ ಮತ್ತು ಕನಕದಾಸರು. ಪುರಂದರದಾಸರು ಸಾವಿರಗಟ್ಟಲೆ ಕೀರ್ತನೆಗಳನ್ನು ರಚಿಸಿ 'ದಾಸರೆಂದರೆ ಪುರಂದರದಾಸರಯ್ಯ' ಎನಿಸಿಕೊಂಡವರು. ಕೀರ್ತನ ಸಾಹಿತ್ಯದಲ್ಲಿ ಅವರ ಕಾಲವನ್ನು 'ಪುರಂದರದಾಸರ ಯುಗ'ವೆಂದೇ ಗುರುತಿಸುತ್ತೇವೆ. ಕನಕದಾಸರ ಕೀರ್ತನೆಗಳ ಸಂಖ್ಯೆ ನೂರರ ಆಚೆ. ಆದರೆ ಕಾವ್ಯಗುಣದಲ್ಲಿ ಪುರಂದರದಾಸರಿಗಿಂತ ಒಂದು ಕೈಮಿಗಿಲು ಎನಿಸಿಕೊಂಡ ಉಜ್ವಲ ಪ್ರತಿಭಾಶಾಲಿ. ಪ್ರಮುಖವಾಗಿ ಬ್ರಾಹ್ಮಣ ಅದರಲ್ಲೂ ಮಾಧ್ವ ಪಂಗಡದವರ ಕ್ಷೇತ್ರವಾದ ಈ ದಾಸಾಕೂಟದಲ್ಲಿ ಏಕೈಕ ಬ್ರಾಹ್ಮಣೇತರ ವ್ಯಕ್ತಿ ಶ್ರೀ ಕನಕದಾಸರು. ಅವರ ವೈರಾಗ್ಯ, ಅನನ್ಯ ಭಕ್ತಿ ಹಾಗೂ ಉಜ್ವಲ ಪ್ರತಿಭೆ ವ್ಯಾಸರಾಯರಂಥರು ಇವರಿಗೆ ದೀಕ್ಷೆ ನೀಡುವಂತೆ ಮಾಡಿತು. ಕನಕದಾಸರ ಕೀರ್ತನೆಗಳು ಇಲ್ಲಿಯವರೆಗೆ ಉಳಿದುಕೊಂಡು ಬಂದಿರುವುದಕ್ಕೆ ಪ್ರತಿಭಾಪಕ್ಷಪಾತಿಗಳಾದ ಸಹೃದಯ ವರ್ಗವಷ್ಟೆ ಅಲ್ಲ ಕನಕದಾಸರ ಪ್ರತಿಭೆಯ ವಿಶೇಷ ಶಕ್ತಿಯು ಮುಖ್ಯ ಕಾರಣ. ಎಲ್ಲಾ ದಾಸರುಗಳಂತೆ ಹರಿಪಾರಮ್ಯವನ್ನು ಒಪ್ಪಿ ಅದೇ ಮಾರ್ಗದಲ್ಲಿಯೇ ಕೀರ್ತನೆಗಳನ್ನು ರಚಿಸಿದ್ದರೂ ವಿಚಾರಪರತೆಯಲ್ಲಿ ಮಿಕ್ಕೆಲ್ಲರಿಗೂ ಮಿಗಿಲು. ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯನಿರತರಿರುವ, ಆದರೆ ತಮ್ಮ ಮನದ ವಿಚಾರಗಳನ್ನು ಕಾವ್ಯ ಕ್ಷೇತ್ರದಲ್ಲಿ ದಾಖಲು ಮಾಡಲಾಗದಿರುವ ಬಹು ಸಂಖ್ಯಾತ ಕೆಳ ಕೆಳವರ್ಗಗಳ ಮುಖವಾಣಿ ಎಂಬಂತೆ ವಿಶಿಷ್ಟ ರೀತಿಯಲ್ಲಿ ತಮ್ಮ ವಿಚಾರಗಳನ್ನು ಕನಕದಾಸರು ದಾಖಲು ಮಾಡುತ್ತಾರೆ. ಅವರ 'ರಾಮಧಾನ್ಯ ಚರಿತೆ'ಯೊಂದೇ ಸಾಕು ಇದಕ್ಕೆ ಉತ್ತಮ ನಿದರ್ಶನ. ಕೀರ್ತನೆಗಳಲ್ಲಿಯೂ ಅವರ ವಿಚಾರಧಾರೆ ಇದೇ ಧಾಟಿಯಲ್ಲಿ ಕೆಲವೊಮ್ಮೆ ತೋರುತ್ತದೆ. 'ಆರು ಹಿತವರು ಎಂದು ನಂಬಬೇಡ' ಎಂಬ ಕೀರ್ತನೆಯನ್ನೇ ತೆಗೆದುಕೊಳ್ಳಿ. ತಂದೆ-ತಾಯಿ-ಮಗ-ಮಡದಿ ಎಂದು ಏನೆಲ್ಲಾ ನಂಬಿಕೆಯ ಬಂಧುಗಳನ್ನು ನಾವು ಹೆಣೆದುಕೊಂಡಿರುತ್ತೇವೆ. ಆ ನಂಬಿಕೆಗಳ ಬುಡವನ್ನು ಅಲುಗಾಡಿಸಿ ನಮ್ಮನ್ನು ವಿಚಾರ ಪರವನ್ನಾಗಿಸುತ್ತದೆ ಈ ಕೀರ್ತನೆ. ಇದೇ ರೀತಿ 'ಬಂದಿದೆ ದೂರು ಬರಿದೇ ಪಾಂಡವರಿಗೆ ಕೊಂದವರಿವರು ಕೌರವರೆಂಬಪಕೀರ್ತಿ' ಎಂಬ ಕೀರ್ತನೆಯಲ್ಲಿ, ಶಕುನಿ,

ಭೀಷ್ಮ, ದ್ರೋಣ, ಕರ್ಣ, ಶಲ್ಯ, ಕೌರವ ಇವರೆಲ್ಲಾ ಕುರುವಂಶ ನಿರ್ಮೂಲನಕ್ಕೆ ಎಷ್ಟೆಷ್ಟು ಕಾರಣ ಎಂಬುದನ್ನು ಒಂದೊಂದೆ ನುಡಿಗಳಲ್ಲಿ ಬಿಡಿಸಿ ತೋರಿಸಿಕೊಡುತ್ತಾರೆ. ಕಡೆಗೆ ತನ್ನ ಪರದೈವ ಆದಿಕೇಶವನನ್ನೇ ಕುರಿತು ಸಂಶಯವಿಲ್ಲದೆ ಕುರು ಬಲವನ್ನೇ ಕೊಂದ ಹಿಂಸಕನಾದಿಕೇಶವನೋ ಪಾಂಡವರೋ ಎಂಬ ಮಾತನ್ನು ಹೇಳುತ್ತಾರೆ. ಜಾನಪದದಲ್ಲಿರುವ 'ಕಡ್ಡಿ ತುಂಡು' ಮಾತಿನ ಸತ್ಯ ನಿಷ್ಠುರತೆ ಇವರ ನುಡಿಗಳಲ್ಲಿ ಕಾಣುತ್ತದೆ. ಎಲ್ಲಾ ದಾಸರುಗಳು ಒಂದು ರೀತಿಯಲ್ಲಿ ವಿಚಾರ ಮಾಡಿದರೆ ಇವರ ವಿಚಾರಗಳ ತಿರುವೇ ಬಹಳ ವಿಶಿಷ್ಟ. 'ಯಾಕೆ ನಿನ್ನಲ್ಲಿ ಪವಾಡಿಸಿದೆ ಹರಿಯೇ' ಎಂಬ ಕೀರ್ತನೆಯಲ್ಲಿ ಆರಂಭದಲ್ಲಿ ದಶಾವತಾರ ಸ್ತುತಿಯನ್ನೇ ಸಾಂಪ್ರದಾಯಕವಾಗಿ ಮಾಡುತ್ತಾ ಬಂದರೂ ಕೊನೆಯ ಸಾಲು ಮಿಂಚು ಹೊಡೆದಂತೆ ಬರುತ್ತದೆ. 'ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ನಿನ್ನೆಬ್ಬಿಸುವರೊಬ್ಬರನ್ನು ಕಾಣೆ' ಉಡುಪಿ ಕೃಷ್ಣನನ್ನೇ ಪೂರ್ವದಿಂದ ಪಶ್ಚಿಮಕ್ಕೆ ತಿರುಗಿಸಿದರೆಂಬ ಐತಿಹ್ಯವಿರುವ ದಾಸರು ಮಲಗಿರುವ ದೇವರನ್ನು ಎಬ್ಬಿಸಬಲ್ಲ ಸತ್ವಶಾಲಿಗಳು ಇಲ್ಲ ಎಂದು ಕಳವಳ ತೋರುತ್ತಾರೆ.

**'ಆರು ಬದುಕಿದರಯ್ಯ ಹರಿ ನಿನ್ನ ನಂಬಿ**

**ತೋರು ಈ ಧರೆಯೊಳಗೆ ಒಬ್ಬರನ್ನು ಕಾಣೆ'**

ಎಂಬ ಪದ್ಯ ಪುರಾಣ ಪ್ರಸಿದ್ಧ ಪ್ರಸಂಗಗಳನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸುತ್ತದೆ. ದೇವರೆಂದಾಕ್ಷಣ ಮಾಡಿದ್ದೆಲ್ಲ ವಿಮರ್ಶಾತೀತ ಎಂದು ದಾಸರು ಭಾವಿಸಿದಂತಿಲ್ಲ. ದೇವರ ಕಾರ್ಯಗಳನ್ನು ವಿನೂತವಾಗಿ ವಿಮರ್ಶಿಸಿ ಬಿಡುತ್ತಾರೆ. ಕಾಗಿನೆಲೆ ಆದಿಕೇಶವನಲ್ಲಿ ಅನನ್ಯ ಭಕ್ತಿ ವ್ಯಕ್ತಪಡಿಸುವ ದಾಸರು ಕೊನೆಯಲ್ಲಿ ಹೇಳುವ ಮಾತು ನೋಡಿ:

**"ವರಕಾಗಿನೆಲೆಯಾದಿಕೇಶವನ ಭಜಿಸಿದರೆ**

**ತಿರಿವೆನೆಂದರೆ ತಿರುಪೆ ಕೂಳ್ಪುಟ್ಟದೈ ಕೃಷ್ಣ ||"**

ಕೃಷ್ಣನನ್ನೇ ನಂಬಿ ವೈರಾಗ್ಯಕ್ಕಿಳಿದ ದಾಸರಿಗೆ ಯಾವ ಕೆಟ್ಟ ಅನುಭವವಾಗಿ ಈ ಮಾತು ಹೊಮ್ಮಿತೋ ದೇವರನ್ನು ನಂಬಿ ಭಜಿಸಿದರೂ ತುರುಪೆ ಕೂಳು ಹುಟ್ಟದು ಎಂದು ಅನ್ನಿಸಿತೋ ತಿಳಿಯದು.

ಪುರಂದರದಾಸ, ಕನಕದಾಸ, ವ್ಯಾಸರಾಯ ಮುಂತಾದ ಹತ್ತಾರು ಹಿರಿಯ ದಾಸರು ಕೀರ್ತನೆಗಳನ್ನು ರಚಿಸಿದ್ದಾರೆ. ಪುರಂದರದಾಸರ "ರಾಮನಾಮ ಪಾಯಸಕ್ಕೆ", ಕನಕದಾಸ "ಎಲ್ಲಾರು ಮಾಡುವುದು ಹೊಟ್ಟೆಗಾಗಿ" ಮುಂತಾದವು ಜನಪ್ರಿಯ ಕೀರ್ತನೆಗಳಾಗಿವೆ.

ಸಂಗೀತದಲ್ಲಿ 'ಕೃತಿ' ಎನ್ನುವುದಕ್ಕೂ ಸಾಹಿತ್ಯದಲ್ಲಿ 'ಕೀರ್ತನೆ' ಎನ್ನುವುದಕ್ಕೂ ವ್ಯತ್ಯಾಸಗಳಿವೆ. ಶಿವಶರಣರ ಕೀರ್ತನೆಗಳನ್ನು ಎಲ್. ಬಸವರಾಜು ಶಿವದಾಸ ಕೀತಾಂಜಲಿ ಎಂದು ಸಂಗ್ರಹಿಸಿ, ಪ್ರಕಟಿಸಿದ್ದಾರೆ. ಹೀಗಾಗಿ ಶಿವದಾಸ ಗೀತೆ/ಹಾಡು ಮತ್ತು ಹರಿದಾಸ ಕೀರ್ತನೆ ಒಂದೇ ಮೂಲದವು ಶಿವಶರಣರು ವಚನಕಾರರಾಗಿದ್ದಂತೆಯೇ ಶೈವ ಕೀರ್ತನಕಾರರೂ ಆಗಿದ್ದರು.

ಮಾಧ್ಯಮತೆ ತತ್ವಜ್ಞಾನ ತಾರತಮ್ಯಗಳನ್ನು ಅನುಸರಿಸಿ ದೇವತಾಸ್ತುತಿ, ಭಗವಂತನ ವಿವಿಧ ಅವತಾರ ಲೀಲೆಗಳ ಉಲ್ಲೇಖ, ಸ್ವಾಭಾವಿಕ ಒಲವು – ನಿಲುವು, ಮಾನಸಿಕ ತೊಳಲಾಟ, ಬಳಲಾಟ, ಸಮಾಜ ವಿಡಂಬನೆ ಮತ್ತು ವಿಮರ್ಶೆ, ಈ ಕೀರ್ತನೆಗಳ ವಸ್ತುವಾಗಿದೆ. ಪುರಂದರದಾಸರ ಕೀರ್ತನೆಯಿಂದ 'ಕರ್ನಾಟಕ ಸಂಗೀತ' ಉದಯವಾದದ್ದು ಒಂದು ಮಹತ್ವದ ವಿಷಯ, ಕೀರ್ತನೆಗಳ ಕೊಡುಗೆ ಕನ್ನಡ ಸಾಹಿತ್ಯಕ್ಕಿಂತ ಕರ್ನಾಟಕ ಸಂಗೀತಕ್ಕೆ ಅಪಾರವಾಗಿ ಅದಮ್ಯವಾಗಿ ನೀಡಿರುವುದು ವಿಶೇಷ.

ಹೀಗೆ ಕೀರ್ತನ ಸಾಹಿತ್ಯವು ಕೇವಲ ಹರಿದಾಸರಿಂದಲ್ಲದೆ ಷಡಕ್ಷರಿ, ನಿಜಗುಣ ಶಿವಯೋಗಿ ಮತ್ತಿತರರಿಂದ ಮತ್ತಷ್ಟು ಉಜ್ವಲವಾಗಿ ಉತ್ಕೃಷ್ಟವಾಗುತ್ತಾ ಸಾಗಿದೆ.

-----

ಅಧ್ಯಾಯ – ೩

# ಉಗಾಭೋಗ, ಸುಳಾದಿ

ಕೀರ್ತನೆ–ಉಗಾಭೋಗ–ಸುಳಾದಿಯಂತಹ ಕಾವ್ಯ ರೂಪಗಳ ಮೂಲಕ ಅಭಿವ್ಯಕ್ತಗೊಂಡ ದಾಸ ಸಾಹಿತ್ಯಕ್ಕೆ ಕರ್ನಾಟಕದಲ್ಲಿ ಬಹುದೊಡ್ಡ ಪರಂಪರೆಯಿದೆ. ಕೀರ್ತನೆ–ಉಗಾಭೋಗ–ಸುಳಾದಿ ಕಾವ್ಯಗಳು ತನ್ನದೇ ಆದಂತಹ ಗುಣ ಲಕ್ಷಣಗಳನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಕೀರ್ತನೆ, ಉಗಾಭೋಗ, ಸುಳಾದಿಗಳು ಹರಿದಾಸ ಸಾಹಿತ್ಯದ ಪ್ರಮುಖ ರೂಪಗಳು. ಹರಿದಾಸ ಸಾಹಿತ್ಯದಲ್ಲಿ ತ್ರಿಪದಿ, ಷಟ್ಪದಿ, ಗುಂಡಕ್ರಿಯೆ, ದಂಡಕ ಮುಂತಾದ ದೇಸೀ ರೂಪಗಳು ಕಂಡು ಬರುತ್ತವೆ. ವಾದಿರಾಜರ 'ಬಿರುದಿನ ಸುವ್ವಾಲಿ', ಜಗನ್ನಾಥ ದಾಸರ 'ತತ್ವ ಸುವ್ವಾಲಿ'ಗಳು ತ್ರಿಪದಿಯಲ್ಲಿ ಬಂದರೆ, ರಾಮಧಾನ್ಯ ಚರಿತೆ(ಕನಕದಾಸರು), ಹರಿಕಥಾಮೃತಸಾರ(ಜಗನ್ನಾಥದಾಸರು) ಗಳಂಥವು ಷಟ್ಪದಿಯಲ್ಲಿ ರಚನೆಗೊಂಡಿವೆ. ವಾದಿರಾಜರಿಂದ ಗುಂಡಕ್ರಿಯೆ, ಶ್ರೀಪಾದರಾಜರಿಂದ ದಂಡಕಗಳು(ಸರಳ ರಗಳೆಯ ರೂಪ) ರಚನೆಗೊಂಡಿವೆ.

## ಉಗಾಭೋಗ(ಸ್ವರ ಪ್ರಧಾನ ಗೀತೆ):

ಕೀರ್ತನ ಸಾಹಿತ್ಯದಲ್ಲಿ ಕಂಡುಬರುವ ಮತ್ತೊಂದು ಪ್ರಕಾರ ಇದಾಗಿದೆ. ಉಗಾಭೋಗಗಳ ಮುಖ್ಯ ಲಕ್ಷಣ ರಾಗ–ತಾಳಗಳ ಕಟ್ಟಿನಿಂದ ಮುಕ್ತವಾಗುವುದು. ಇವು ಶಿವಶರಣರ ವಚನಗಳನ್ನು ಬಹುಮಟ್ಟಿಗೆ ಹೋಲುತ್ತದೆ. ಇದು ಸ್ವರ ಪ್ರಧಾನ ಗೀತ, ಉದ್ಗಾಹ, ಮೋಲಾಪ, ಧ್ರುವ, ಅಂತರ, ಅಭೋಗ, ಇವು ಐದು ಈ ರಾಗಗೀತದ ಅವಯವಗಳು. ಉಗಾಭೋಗಗಳಿಗೆ ಇಷ್ಟೇ ಪಾದಗಳಿರಬೇಕೆಂಬ ನಿಯಮ ಇಲ್ಲ.

ಉಗಾಭೋಗಕ್ಕೆ ಉದಾ:

**"ಜಾಲಿಸಬೇಕು ಜಾಲಿಸಬೇಕು ಜಾಲಿಸಬೇಕು । ಜಾಲಗಾರರಾಗಿ**

**ಜಾಲ ಪಾಪಂಗಳು ಕಸ ಪೋಗುವಚಿತೆ ಜಾಲಿಸಬೇಕು**
**ಜಾಳಿಗೆ ಚೆನ್ನಾಗಿ ತುಂಬಲು ಮಾಯಾ**
**ಜಾಲ ವಿಜಯವಿಠಲನ ಸನ್ನಿಧಿಯಲ್ಲಿ**
**ಜಾಳಿಗೆಯಿಟ್ಟು ಜನನ ನೀಗಬೇಕು"**

ಉಗಾಭೊಗಗಳು ಸಂಗೀತ ಶಾಸ್ತ್ರದಲ್ಲಿನ ಒಂದು ಪ್ರಕಾರವಾಗಿದ್ದೂ ಭಾರತ ಸಂಗೀತಕ್ಕೆ ಕರ್ನಾಟಕದ ಹರಿದಾಸರು ನೀಡಿರುವ ವಿಶಿಷ್ಟ ಕೊಡುಗೆ. ಸಾಮಾನ್ಯವಾಗಿ ಉಗಾಭೋಗ ಕೃತಿಗಳು ೪ ಸಾಲುಗಳಿಂದ ೧೨ ಸಾಲುಗಳವರೆಗೆ ಇರುತ್ತವೆ. ಪುರಂದರದಾಸರು, ಕನಕದಾಸರು, ವಿಜಯದಾಸರು ಹೀಗೆ ಹಲವು ದಾಸವರೇಣ್ಯರು ಉಗಾಭೋಗಗಳನ್ನು ರಚಿಸಿದ್ದಾರೆ. ಉಗಾಭೋಗಗಳಲ್ಲಿ ಭಕ್ತಿ, ನೈತಿಕತೆ, ಧರ್ಮ, ನೀತಿ, ಹರಿನಾಮ ಸ್ಮರಣೆ ಹೀಗೆ ಹಲವು ವಿಷಯಗಳ ಬಗ್ಗೆ ಚರ್ಚಿಸಿರುವುದನ್ನು ನಾವು ಕಾಣಬಹುದಾಗಿದೆ.

**ಉಗಾಭೋಗ ಶಬ್ದ ನಿಷ್ಪತಿ:**

ಭಾರತೀಯ ಹಾಗೂ ಜನಪದ ಸಂಗೀತಗಳು ತಮ್ಮ ನಡುವೆ ರಚಿಸಿಕೊಂಡಿರುವ ಹಲವು ಸೇತುವೆಗಳಲ್ಲಿ ಇದೂ ಒಂದು. ಉಗಾಭೋಗವೆಂಬ ಶಬ್ದವೂ ಪ್ರಬಂಧ ಪ್ರಕಾರವೂ ಹೇಗೆ ಮತ್ತು ಯಾವಾಗ ಹುಟ್ಟಿದುವು ಎಂದು ನಿಷ್ಕೃಷ್ಟವಾಗಿ ನಿರ್ಧರಿಸಲು ಆಧಾರ ಸಾಲದು. ಈ ಅದದ ರೂಪನಿಷ್ಪತ್ತಿಯನ್ನು ಹಲವಾರು ಹಲವು ವಿಧವಾಗಿ ಕೊಡುತ್ತಾರೆ. ಉಕ್+ಆಭೋಗ, ಎಂದರೆ ಮಾನವನ ಅನುಭವ ಸಮಷ್ಟಿಯ ವಾಗಭಿವ್ಯಕ್ತಿ ಎನ್ನುವುದು ಒಂದು ಪಂಥ. ಯುಗಾಭೋಗ ಎಂದರೆ ಪರಮಾತ್ಮನಲ್ಲಿ ಲೀನವಾಗಿಬಿಡುವುದರ ಆನಂದಾನುಭವ, ಎನ್ನುವುದು ಎರಡನೆಯದು. ಉದ್ಗ್ರಾಹ+ಆಭೋಗ ಎಂಬ ಸಂಧಿಯಲ್ಲಿ ಕಠಿಣೋಚ್ಚರಿತಗಳಾದ ದ್, ರ್, ಹ್ ಗಳ ಲೋಪದಿಂದ ಈ ಪದ ಹುಟ್ಟಿದೆ ಎನ್ನುವುದು ಹೆಚ್ಚು ಪ್ರಚಾರದಲ್ಲಿರುವ ಮತ. ಸಂಗೀತ ಪ್ರಬಂಧವೊಂದನ್ನು ಮೊದಲು ಮಾಡುವ ಧಾತುಭಾಗಕ್ಕೆ ಉದ್ಗ್ರಾಹವೆಂದೂ, ಮುಗಿಸುವ ಧಾತುಭಾಗಕ್ಕೆ ಆಭೋಗವೆಂದೂ ಸಂಗೀತಶಾಸ್ತ್ರದ ಪರಿಭಾಷೆ. ಈ ಮೂರು ಮತಗಳೂ ಕೇವಲ ಕಲ್ಪನೆಯಿಂದ ಹುಟ್ಟಿವೆ. ಭಾಷಾತ್ಮಕ, ಚಾರಿತ್ರಿಕ ಅಥವಾ ಇತರ ಯಾವ ಆಧಾರಗಳೂ ಇವಕ್ಕೆ ಇಲ್ಲ. ಕಡೆಯದು ಸಂಗೀತಶಾಸ್ತ್ರ ಪ್ರಕ್ರಿಯೆಗೆ ವಿರುದ್ಧವಾದುದು. ಏಕೆಂದರೆ ಸಂಗೀತ ಪ್ರಬಂಧ ಧ್ರುವವೆಂಬ ಅನಿವಾರ್ಯ ಧಾತುಭಾಗದಿಂದ ಆಗತಕ್ಕದ್ದು. ಉದ್ಗ್ರಾಹ, ಆಭೋಗಗಳಿಂದಲೇ ಯಾವ ಹಾಡೂ ಆಗಲಾರದೆಂಬುದನ್ನು ಸಂಗೀತಶಾಸ್ತ್ರ ಹೇಳುತ್ತದೆ. ಇವುಗಳಲ್ಲಿ ಯಾವುದೂ ಸಮರ್ಪಕವಾಗಿ ಕಾಣುವುದಿಲ್ಲ. ಸೂಡಾದಿ ಎಂಬುದು ದೇಶೀ ಶಬ್ದವೆಂದೂ ಆದುದರಿಂದ

ಸಂಸ್ಕೃತ ನಿಷ್ಪತ್ತಿಸಿದ್ಧಿ ಅದಕ್ಕಿಲ್ಲವೆಂದೂ ಸಂಗೀತರತ್ನಾಕರದಿಂದ ಕಂಡುಬರುತ್ತದೆ. ಉಗಾಭೋಗವೂ ಅಂಥದೇ ಒಂದು ಗೀತ ಪ್ರಕಾರಸಂಜ್ಞಕವಾಗಿರುವ ರೂಢನಾಮವಾಗಿರಬಹುದೆಂಬುದು ಹೆಚ್ಚು ಸಂಭಾವ್ಯವಾಗಿದೆ. ಪುರಂದರದಾಸರೂ ಅವರಿಗೆ ಪ್ರಾಚೀನರಾದ ಹರಿದಾಸರೂ ಉಗಾಭೋಗಗಳನ್ನು ರಚಿಸಿದ್ದರು. ಆದರೂ ಅವರು ಉಗಾಭೋಗವೆಂಬ ಹೆಸರನ್ನು ಹೇಳಿರುವುದು ಎಲ್ಲೂ ಕಂಡುಬಂದಿಲ್ಲ. ಪುರಂದರದಾಸರೇ ಕೃತಿ, ಕೀರ್ತನೆ, ಸುಳಾದಿ, ಗೀತ, ಪ್ರಬಂಧ, ನಾಮಾವಳಿ ಮುಂತಾದ ಹಾಡಿನ ರೀತಿಗಳನ್ನು ಹೆಸರಿಸಿದ್ದಾರೆ. ಆದರೆ ಪುರಂದರದಾಸ ವಿರಚಿತ ಕೃತಿಗಳ ಮೊತ್ತವನ್ನು ವರ್ಣಿಸುವ ತಮ್ಮ ಒಂದು ಸುಳಾದಿಯಲ್ಲಿ ವಿಜಯದಾಸರು ಇನ್ನೂ ಹೆಸರಿಸಿದ್ದಾರೆ. ಹೀಗಿದ್ದರೂ ಈ ಹೆಸರು ಇನ್ನೂ ಪ್ರಾಚೀನವಾಗಿದ್ದಿರಬೇಕೆಂಬುದು ನಿಸ್ಸಂದೇಹ.

### ಉಗಾಭೋಗದ ಪ್ರಾಚೀನತೆ:

ಉಗಾಭೋಗದ ಹುಟ್ಟನ್ನು ಪ್ರಾಚೀನ, ಗೌರವಾನ್ವಿತ ಸಾಲಗಸೂಡ ಪ್ರಬಂಧಗಳಲ್ಲಿ ನಿಸ್ಸಂದಿಗ್ಧವಾಗಿ ಕಾಣಬಹುದು. ಈ ಪ್ರಬಂದಗಳೇ ಸುಳಾದಿಗಳಿಗೆ ಮಾತೃಸ್ಥಾನದಲ್ಲಿದ್ದವು. ಇವುಗಳಲ್ಲಿ ರಾಸಕ ಪ್ರಬಂಧದಲ್ಲಿ ಮಾತುಧಾತುಗಳ ಸ್ವಕಪೋಲ ಕಲ್ಪಿತ, ಕಲ್ಪನಾಜನಿತ ನಿರ್ಮಾಣವನ್ನು ಶಾಸ್ತ್ರ ವಿಧಿಸುತ್ತದೆ. ಇದರಲ್ಲಿ ಉದ್ಗ್ರಾಹದಲ್ಲಿ ಎರಡು ಖಂಡಗಳಿವೆ: ಮೊದಲ ಖಂಡದಲ್ಲಿ ಮೇಲಿನ ರೀತಿಯಲ್ಲಿ ಮಾತುಸಹಿತವಾದ ಆಲಾಪನೆಯಿದ್ದರೆ ಅಂಥ ಪ್ರಬಂಧವನ್ನು ನಂದರಾಸಕವೆಂದು ಕರೆಯಲಾಗುತ್ತಿತ್ತು. ಧ್ರುವದ ಯಾವ ಭಾಗದಲ್ಲಿ ಇಂಥ ಆಲಾಪನೆಯಿರುತ್ತಿದ್ದರೆ ಅದನ್ನು ಅನುಸರಿಸಿ ಬೇರೆ ಬೇರೆ ಅವಾಂತರ ಪ್ರಭೇದಗಳನ್ನು ರಾಸಕದಲ್ಲಿ ರಚಿಸಲಾಗುತ್ತಿತ್ತು. ಈ ಸಾಕ್ಷರ ಆಲಾಪನೆಯೇ ಅಲ್ಲದೆ ಕೆಲವು ವೇಳೆ ಅಕ್ಷರವರ್ಜ್ಯವಾದ ಕೇವಲ ರಾಗಾಲಾಪ್ತಿಯೂ ಏಕತಾಲೀಯಂಥ ಸಾಗಸೂಡ್ರಬಂಧಗಳಲ್ಲಿ ಇರುತ್ತಿತ್ತು. ಇದಕ್ಕೆ ಪ್ರಯೋಗವೆಂದು ಹೆಸರು. ಸುಳಾದಿಗಳು ನಿರ್ದಿಷ್ಟರೂಪವನ್ನು ಪಡೆದು ಸಲಗಸೂಡಗಳಿಂದ ಹೊರಬಂದಾಗ ಈ ಬಗೆಯ ಸಾಕ್ಷಾರಾಲಪ್ತಿ ಪ್ರತ್ಯೇಕ ಸ್ಥಾನವನ್ನು ಪಡೆದು ಬೇರೆಯ ಹಾದಿನ ರೀತಿಯೇ ಆಯಿತು. ಇದೇ ಉಗಾಭೋಗ. ಈ ಸ್ವಾಭಾವಿಕ ಪೃಥಕ್ಕರಣವನ್ನು ತಾರ್ಕಿಕವಾಗಿ ಸಾಧಿಸಿ ಲಕ್ಷ್ಯದಲ್ಲಿ ಅಚಲವಾಗಿ, ಸ್ವತಂತ್ರವಾಗಿ ನಿಲ್ಲಿಸಿದವರು ಕರ್ಣಾಟಕದ ಹರಿದಾಸರು.

### ಉಗಾಭೋಗದ ಬೆಳವಣಿಗೆ:

ವಿವಿಧ ಲಲಿತಕಲೆಗಳಲ್ಲೂ ಒಂದು ಕೃತಿ ಪ್ರಕಾರ ಒಡೆದು ಎರಡು ಸ್ವತಂತ್ರ ಕೃತಿಪ್ರಕಾರಗಳಾಗಿ ನಿಲ್ಲುವುದು ಬೇರೆ ಬೇರೆ ಕಾಲಗಳಲ್ಲಿ ಕಂಡುಬರುತ್ತದೆ. ಭರತನಾಟ್ಯದಲ್ಲಿ ಪುಷ್ಪಾಂಜಲಿ ಅಲರಿಪು ಮತ್ತು ಜತಿಸ್ವರಗಳಾಗಿ ರೂಡಿಸಿದುದನ್ನು ಇಲ್ಲಿ ನಿದರ್ಶನವಾಗಿ ಕೊಡಬಹುದು. ನಿಸರ್ಗದಲ್ಲೂ ಈ ಬಗೆಯ ವಿದಳನಸೃಷ್ಟಿ ಸಿದ್ಧವಾಗಿಯೇ ಇದೆಯಷ್ಟೆ. ಉಗಾಭೋಗ ರಾಗಸಹಿತವಾದ ಮತ್ತು ತಾಳರಹಿತವಾದ, ಎಂದರೆ ಅನಿಬದ್ಧವಾದ ರಚನೆ. ತಾಳದಿಂದ ಬದ್ಧವಲ್ಲದಿದ್ದರೂ ಅದು ಛಂದೋಪ್ರಾಸಾದಿ ಕಾವ್ಯ ಲಕ್ಷಣಗಳಿಂದ ಕೂಡಿದೆ. ಇದು ಮಾತು ಪ್ರಧಾನವಾದುದು, ಎಂದರೆ ಸಾಹಿತ್ಯಾರ್ಥದ ರಂಜನಾಸ್ಪದ, ಭಾವಾತ್ಮಕ ಅಭಿವ್ಯಕ್ತಿಗಾಗಿ ರಾಗದಲ್ಲಿ ಅಳವಡಿಸಿ ಹಾಡುವಂಥದು. ಗದ್ಯ ದಂಡಕ, ಚೂರ್ಣಿಕೆ ಮೊದಲಾದ ಗದ್ಯಪ್ರಧಾನ ಗೇಯಪ್ರಕಾರಗಳಿಗೂ ಗಮಕದಂಥ (ಭಾರತವಾಚನ ಇತ್ಯಾದಿ) ಪದ್ಯಪ್ರಧಾನ ಗೇಯ ಪ್ರಕಾರಗಳಿಗೂ ಇದು ಮಧ್ಯದಲ್ಲಿದೆ. ಎಂದೇ ಇದರ ರಚನೆಯಲ್ಲಿ ಸ್ವಲ್ಪ ಶೈಥಿಲ್ಯವೂ ಕಾಮಚಾರವೂ ಕಂಡುಬರುತ್ತದೆ. ಉಗಾಭೋಗಕ್ಕೆ ನಿರ್ದಿಷ್ಟವಾದ ರಾಗಗಳನ್ನು ವಿಧಿಸಿರುವುದಾಗಲೀ ಶಾಸ್ತ್ರದಲ್ಲೂ ಸಂಪ್ರದಾಯದಲ್ಲೂ ಕಂಠಪರಂಪರೆಯಲ್ಲೂ ಹಸ್ತಪ್ರತಿ ಆಕರಗಳಲ್ಲೂ ಕಂಡುಬರುವುದಿಲ್ಲ. ಇದರಿಂದಾಗಿ ಉಗಾಭೋಗವನ್ನು ಹಾಡ ಬಯಸುವವರಿಗೆ ತಮ್ಮ ಮನೋಧರ್ಮ, ಸಾಹಿತ್ಯಾನುಗುಣ್ಯತೆ, ರಸೌಚಿತ್ಯ ಮುಂತಾದವನ್ನು ದೃಷ್ಟಿಯಲ್ಲಿಟ್ಟುಕೊಂಡು ತಮಗೆ ಬೇಕೆನಿಸುವ ಯಾವುದೇ ರಾಗದಲ್ಲಿ ಅದನ್ನು ಹಾಡುವ ಸ್ವಾತಂತ್ರ್ಯವಿದೆ. ಕಠಿಣ ನಿಯಮಗಳಿಂದ ಛಂದೋಪ್ರಾಸಾದಿ ಲಕ್ಷಣಗಳು ನಿರ್ಬಂಧಿತವಲ್ಲವಾದರೂ ಅವು ಸ್ಪಷ್ಟವಾಗಿ ರಚನೆಯ ಅವಿಭಾಜ್ಯ ಅಂಗಗಳೇ ಆಗಿವೆ. ಆದ್ದರಿಂದಲೇ ಈ ಲಕ್ಷಣಗಳಿಲ್ಲದ ವಚನಗಳು ಉತ್ಸಾಹೀ ಆಸಕ್ತರ ಬೃಹತ್ಪ್ರಯತ್ನವನ್ನು ಮೀರಿಯೂ ಯಶಸ್ವಿಯಾಗಿಯೇ ಉಳಿದವು. ಉಗಾಭೋಗವೋ ಯಶಸ್ವಿಯಾಗಿ ಶಾಸ್ತ್ರೀಯ ಸಂಗೀತದ ಒಳಾಂಗಣವನ್ನು ಪ್ರವೇಶಿಸಿ ಪ್ರಯೋಗ ಪ್ರಾಚುರ್ಯವನ್ನು ಪಡೆಯಿತು. ಉಗಾಭೋಗವನ್ನು ಹಾಡುವವರು ಸಾಮಾನ್ಯವಾಗಿ ದೇವರನಾಮವೊಂದರ ಪೀಠಿಕಾರೂಪದಲ್ಲಿ ಹಾಡುತ್ತಾರೆ. ಉಗಾಭೋಗಗಳಲ್ಲಿ ಹೆಚ್ಚಿನ ಪಾಲು ಪುರಂದರದಾಸರೂ ವಿಜಯದಾಸರೂ ರಚಿಸಿದವೇ ಆಗಿವೆ. ಇವುಗಳಲ್ಲಿ ನಾಲ್ಕು ಸಾಲುಗಳಿಗಿಂತ ಕಡಿಮೆಯಾಗಿಯೂ ಹನ್ನೆರಡು ಸಾಲುಗಳಿಗಿಂತ ಹೆಚ್ಚಾಗಿಯೂ ಇರುವುದು ಎಲ್ಲೂ ಕಾಣಬರುವುದಿಲ್ಲ. ಸಾಮಾನ್ಯವಾಗಿ ಸಾಲುಗಳ ಉದ್ದ ಸ್ಥೂಲವಾಗಿ ಒಂದೇ ಆಗಿದ್ದರೂ ಅಪವಾದಗಳು ಬಹುವಾಗಿ ದೊರೆಯುತ್ತದೆ. ಇವುಗಳಲ್ಲೆಲ್ಲ ದ್ವಿತೀಯ ಪ್ರಾಸದ ರಚನರಗಳೇ ಅತ್ಯಧಿಕ. ಉಳಿದ ಅಕ್ಷರಗಳ ಪ್ರಾಸಸಂಯೋಜನೆ ಬಹುಶಃ ಇಲ್ಲವೆಂದರೂ ಸಲ್ಲುತ್ತದೆ. ಕೆಲವು ವೇಳೆ ಪಾಸ ಸೌಕರ್ಯಕ್ಕಾಗಿ ಸಾಲುಗಳ ಉದ್ದವನ್ನು ಹೆಚ್ಚು ಕಡಿಮೆ ಮಾಡುವ ಆವಶ್ಯಕತೆಯೂ ಬರುತ್ತದೆ. ಇದರಿಂದ ಗೇಯ ಸ್ವರೂಪಕ್ಕೆ, ತಾಳವಿಲ್ಲದುದರಿಂದ, ಬಾಧೆಯೇನೂ ಇಲ್ಲ. ಇಷ್ಟಾದರೂ ಕೆಲವು ವೇಳೆ-ವಿಶೇಷವಾಗಿ ಕಡೆಯ ಸಾಲಿನಲ್ಲಿ ಪ್ರಾಸ ಸಂಪೂರ್ಣವಾಗಿ ಮಾಯವೇ ಆಗಿಬಿಡುವುದೂ ಉಂಟು. ಕೃತಿಕಾರನ ಅಂಕಿತ ಅತ್ಯಧಿಕವಾಗಿ ಕಡೆಯ ಸಾಲಿನಲ್ಲೂ

ವಿರಳವಾಗಿ ಅದರ ಹಿಂದಿನ ಸಾಲಿನಲ್ಲೂ ಬರುತ್ತದೆ. ತಾಳವಿಲ್ಲದಿದ್ದರೂ ಪ್ರಾಸವೂ ಅನಿರ್ಬಂಧಿತ ಪುರೋಗಾಮಿ ಛಂದೋ ಪ್ರವೃತ್ತಿಯೂ ಇರುವುದರಿಂದ ಒಂದು ಬಗೆಯ ಸ್ಥೂಲ ಲಯಪ್ರಕಾರ ಇದಕ್ಕೆ ಅನ್ವಯವಾಗುತ್ತದೆ. ಸಾಹಿತ್ಯ ಮತ್ತು ರಾಗಭಾಗಗಳಲ್ಲಿನ ರಸಪ್ರತೀತಿ ಈ ಲಯವನ್ನು ಸಾಕಷ್ಟು ನಿರ್ಧರಿಸುತ್ತದೆ. ಆದ್ದರಿಂದ ಉಗಾಭೋಗವನ್ನು ಸ್ವೇಚ್ಛೆಯಾಗಿ ಕಾಮಚಾರದಿಂದ ಹಾಡಿಕೊಳ್ಳಬಹುದು. ಇದನ್ನು ನಿರ್ದಿಷ್ಟ ಸ್ವರೂಪವಿಲ್ಲದ ಹಾಡೆಂದು ತಿಳಿಯಲಾಗದು. ಇದರಲ್ಲಿ ಸಮಸಂಖ್ಯೆಯ-೪,೬,೮,೧೦,೧೨ ಸಾಲುಗಳ ಪ್ರಯೋಗವೇ ಸಾಮಾನ್ಯವಾಗಿ ಕಂಡುಬರುತ್ತದೆ. ಐದು ಸಾಲುಗಳಿರುವ ಅತ್ಯಲ್ಪ ಸಂಖ್ಯೆಯ ಉಗಾಭೋಗಗಳಲ್ಲಿ ಪ್ರಾಸದೃಷ್ಟಿಯಿಂದ ಸಾಲುಗಳ ಉದ್ದವನ್ನು ವ್ಯತ್ಯಾಸ ಮಾಡಿಕೊಂಡು ನಾಲ್ಕು ಅಥವಾ ಆರು ಸಾಲುಗಳಾಗಿ ಮಾಡಿಕೊಳ್ಳಬಹುದು. ಬಹುಶಃ ಇದೇ ಸರಿಯೆಂದೂ ಕಾಣುತ್ತದೆ. ಇಡೀ ರಚನೆಯನ್ನು ಒಂದಾಗಿ, ಎಂದರೆ ಅಖಂಡವಾಗಿ ಹಾಡಲಾಗುತ್ತದೆ. ಎಂದರೆ ಪಲ್ಲವಿ, ಅನುಪಲ್ಲವಿ, ಚರಣಗಳಂಥ ವಿಭಜನೆ ಇದರಲ್ಲಿಲ್ಲ. ಸಾಹಿತ್ಯ ಭಾವದ ವಿಸ್ತಾರಕ್ಕೆ ಬೇಕಾದರೆ ವಿವಿಧ ಭಾಗಗಳ ಪುನರುಕ್ತಿ, ಭಿನ್ನ ರೀತಿಯ ಜೋಡಣೆ ಮುಂತಾದವನ್ನು ಮಾಡಿಕೊಳ್ಳಬಹುದು. ಇದನ್ನು ಸಾಮಾನ್ಯವಾಗಿ ಒಂದೇ ರಾಗದಲ್ಲಿ ಹಾಡಲಾಗುತ್ತದೆ.

ಉಗಾಭೋಗದ ಸಾಹಿತ್ಯ ಮುಖ್ಯವಾಗಿ ಧಾರ್ಮಿಕವಾದದ್ದು. ವಚನಗಳು ವೀರಶೈವ ಮತದ ಪ್ರಮೇಯ ಸಾಮಾಗ್ರಿಯನ್ನು ಒಳಗೊಂಡರೂ ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿರುವಂತೆ ಉಗಾಭೋಗಗಳೂ ಪ್ರಧಾನವಾಗಿ ಮಧ್ವಮತದ ದ್ವೈತ ತತ್ತ್ವ ಪ್ರಕ್ರಿಯೆಗಳನ್ನೇ ವಿಶೇಷವಾಗಿ ಆಶ್ರಯಿಸಿದರೂ ಇತರ ಚಿರಂತನ ಮೌಲ್ಯ ಸಾಮಗ್ರಿಯನ್ನೂ ಒಳಗೊಂಡಿದೆ. ಆಚಾರ, ಲೋಕನೀತಿ, ಧ್ಯಾನ, ಧರ್ಮ, ಆಧ್ಯಾತ್ಮ ಚಿಂತನೆ, ನೀತಿ, ಕರ್ತವ್ಯಪರಾಯಣತೆ, ಹರಿಮಾಹಾತ್ಮ್ಯ, ಭಕ್ತನ ಲಕ್ಷಣ ಹಾಗೂ ಮಹಿಮೆ, ಪ್ರಾರ್ಥನೆ, ನಾಮ ಮಹಿಮೆ, ಪೂಜಾವಿಧಾನ- ಇಂಥ ಎಷ್ಟೋ ವಿಷಯಗಳ ಗಣಿಯೇ ಉಗಾಭೊಗಗಳಲ್ಲಿ ದೊರೆಯುತ್ತದೆ. ಸಾಹಿತ್ಯ ಶೈಲಿ, ವಿನ್ಯಾಸ, ಪದಶಯ್ಯೆ ಮುಂತಾದವು ಆಯಾ ವಾಗ್ಗೇಯಕಾರನ ಪ್ರತಿಭೆಯನ್ನು ಅವಲಂಬಿಸಿದರೂ ನಿರೂಪಣೆ ತಿಳಿಯಾಗಿಯೂ ಸ್ವಾರಸ್ಯವಾಗಿಯೂ ನೇರವಾಗಿಯೂ ಇದೆ. ಇವುಗಳಲ್ಲದೆ. ಹಲವು ಕಾವ್ಯ ಸಂದರ್ಭಗಳೂ ರಮಣೀಯ ಸನ್ನಿವೇಶಗಳೂ ವೇದ, ಉಪನಿಷತ್ತು, ಇತಿಹಾಸ, ಪುರಾಣ ಸ್ಮೃತಿಗಳ ಸಾರಗ್ರಹಣವೂ ಉತ್ಕಟವಾದ ಆತ್ಮೀಯತೆ, ಪ್ರಾಮಾಣಿಕತೆ, ಜೀವನ ದರ್ಶನ ಇವುಗಳೂ ಉಗಾಭೋಗಗಳನ್ನು ರಸಿಕ ರಂಜನಕ್ಕೂ ಸಂಸ್ಕೃತಿ ಪ್ರಸಾರಕ್ಕೂ ಆತ್ಮಬೋಧೆಗೂ ಉತ್ಕೃಷ್ಟಸಾಧನಗಳನ್ನಾಗಿ ಮಾಡಿವೆ. ಆದ್ದರಿಂದ ನಮ್ಮ ಸಂಸ್ಕೃತಿ, ಸಮಾಜ, ಸಾಹಿತ್ಯ ಮತ್ತು ಸಂಗೀತಗಳಲ್ಲಿ ಉಗಾಭೋಗ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ.

## ಸುಳಾದಿ(ಲಯಪ್ರಧಾನ ಗೀತೆ):

ಸುಳಾದಿಯೆಂದರೆ ಸೂಡಾಲಿ, ವಾದ್ಯ ನರ್ತನಗಳಿಗೆ ಉಪಯಕ್ತವಾದದ್ದು. ಧ್ರುವ, ಮಟ್ಟ, ರೂಪಕ, ಝಂಪ, ತ್ರಿಪುಟ, ಅಟ್ಟ, ಏಕತಾಳ–ಸಾಮಾನ್ಯವಾಗಿ ಈ ಸಪ್ತ ತಾಳಗಳಿಗೆ ಏಳು ನುಡಿಗಳಿದ್ದು ಕೊನೆಯಲ್ಲಿ ಜತೆ, ಜತ್ತೆ ಅರ್ಥಾತ್ ಜೊತೆ ಇರುತ್ತದೆ. ಕೆಲವೆಡೆ ಐದು ನುಡಿಗಳೂ ಇರುತ್ತವೆ. ಇದು ಲಯಪ್ರಧಾನ ಗೀತೆ, ಸುಳಾದಿಗಳು, ಕೀರ್ತನೆ ಮತ್ತು ಉಗಾಭೋಗಗಳಿಗಿಂತ ಬಿಗಿಯಾದ ಬಂಧವನ್ನು ಹೊಂದಿವೆ. ಸಾಹಿತ್ಯದ ಚೌಕಟ್ಟುಗಳಲ್ಲಿ ತತ್ವ ನಿರೂಪಣೆ ಇವುಗಳು ಸುಳಾದಿಗಳಲ್ಲಿ ಪ್ರಮುಖ ವೈಶಿಷ್ಟ್ಯವಾಗಿವೆ. ಸಾಮಾನ್ಯವಾಗಿ ಎಲ್ಲ ದಾಸರು ಸುಳಾದಿಗಳ ಮೇಲೆ ಕೈಯಾಡಿಸಿದ್ದರೂ ವಿಜಯದಾಸರು ಸುಳಾದಿಯ ದಾಸರೆಂದೇ ಖ್ಯಾತಿ ಪಡೆದಿರುವುದುಂಟು. ಸುಳಾದಿಗೆ ಒಂದು ಉದಾ:

ಧ್ರುವತಾಳ: **"ಹುಟ್ಟು ಭೀತಿ ಹೊಂದುವ ಭೀತಿ**

**-ವಿಟ್ಠಲಲನುಪ್ರಿಯ ನೆನೆಯದವಗೆ**

**ಕಾಲನಭೀತಿ ಕರ್ಮದ ಭೀತಿ ಗೋಪಾಲನ ದಾಸನಾಗದವಗೆ**

**ಅರಿಷಡ್ವರ್ಗದ ಮಹಾಭೀತಿ ಹರಿನಾಮ ಉಚ್ಚರಿಸದವರಿಗೆ**

**ಹಲವು ಮಾರಿನಲೇನು ಹಲವು ಭೀತಿ ನಮ್ಮ ಪುರಂದರ ವಿಠಲನಪೂಜಿಸದವಗೆ"**

ಉದ್ಗ್ರಾಹ, ಮೇಲಾಪಕ, ಧ್ರುವ, ಅಂತರ, ಆಭೋಗ ಎಂಬ ಐದು ಧಾತುಗಳಿಂದ ಉಗಾಭೋಗ ರಚನೆಗೊಂಡಿತೆಂದು ಹೇಳಲಾಗಿದೆ. ಇಂಥ ಹಲವು ರೂಪಗಳಲ್ಲಿ "ತಾಳ ಪ್ರಧಾನವಾಗಿ ಸಪ್ತ ತಾಳಗಳಲ್ಲಿ 'ಜತೆ' ಎಂಬ ೨ ಸಾಲಿನೊಂದಿಗೆ, ಅಂಕಿತದೊಂದಿಗೆ ಕೊನೆಗೊಳ್ಳುವ ರಚನೆಯಾಗಿ "ಸುಳಾದಿ" ದಾಸ ಸಾಹಿತ್ಯದಲ್ಲಿ ತನ್ನದೆ ಆದ ಸ್ಥಾನವನ್ನು ಪಡೆದುಕೊಂಡಿದೆ". ಹರಿದಾಸರ ಪರಂಪರೆಯಲ್ಲಿ ಮೊದಲಿಗೆ ಆದ್ಯರು 60 ಜನರು ನಂತರ ಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀಹಯವದನರು, ಶ್ರೀ ಪುರಂದರದಾಸರು, ಶ್ರೀವಿಜಯದಾಸರು ರಚಿಸಿಕೊಂಡು ಬಂದಿದ್ದಾರೆ. ಕೀರ್ತನೆಯು ಅನೇಕ ರಾಗ ಮಾಲಿಕೆಗಳಲ್ಲಿದ್ದು ಒಂದೇ ತಾಳದಲ್ಲಿದ್ದಂತೆ, ಒಂದೆ ರಾಗ ಅನೇಕ ತಾಳದಲ್ಲಿರುವುದು ಸುಳಾದಿ.

ಏಳು ಭಿನ್ನ ತಾಳಗಳ ನುಡಿಗಳನ್ನು ಏಕತ್ವಗೊಳಿಸಿ 'ಸುಳಾದಿ' ರಚನೆಗೊಳ್ಳುತ್ತದೆ. ಅವೇ ೧.ಧ್ರುವ, ೨.ಮಟ್ಟ, ೩.ರೂಪಕ, ೪.ಝಂಪ, ೫.ತ್ರಿಪುಟ, ೬.ಅಟ್ಟ ಮತ್ತು ೭.ಆದಿ ತಾಳಗಳು. ಕನಿಷ್ಟ ೫, ಗರಿಷ್ಟ ೧೦ ನುಡಿಗಳು ಸುಳಾದಿಗಳಲ್ಲಿ ಇವೆ. ೫ ನುಡಿಗಳಲ್ಲಿ(ರೂಪಕ, ಝಂಪ ಹೊರತುಪಡಿಸಿ), ೧೦ ರಲ್ಲಿ ಪುನಾವರ್ತನೆಗೊಳ್ಳುತ್ತವೆ. ಮುಂದೆ 'ಜತೆ'ಯಲ್ಲಿ ಎಲ್ಲ ತಾಳಗಳಲ್ಲಿ ಹೇಳಿರುವುದು ಜೊತೆಯಾಗಿ ಕೂಡಿಕೊಂಡು ಬರುವುದು. ಅಂದರೆ ಎರಡು ಸರಳ ರೇಖೆಗಳು ಹೇಗೆ ಜೊತೆಯಾಗಿರುವವೊ ಹಾಗೆಯೆ ಸಮನ್ವಯಿಸುವುದು. ಪದದ ಅರ್ಥ ಪಲ್ಲವಿಯಲ್ಲಿದ್ದಂತೆ ಸುಳಾದಿಯ ಅರ್ಥ ಅಭಿಪ್ರಾಯ ಜೊತೆಯಲ್ಲಿರುವುದು.

**ಸುಳಾದಿಯ ಏಳು ತಾಳಗಳ ಸಾಮಾನ್ಯ ವಿವರಣೆ:**

**ಧ್ರುವತಾಳ** :– ವಸ್ತು ನಿಶ್ಚಯ ವಿಷಯ.

**ಮಟ್ಟತಾಳ** :– ವಸ್ತುವಿನ ಗುಣಧರ್ಮ ನಿರೂಪಣೆ.

**ರೂಪತಾಳ** :– ವಸ್ತುವಿನ ಗುಣಧರ್ಮ ಕಾರಣ ವಿವೇಚನೆ.

**ಝಂಪಾತಾಳ** :– ವಸ್ತು ಗುಣಧರ್ಮ ಕಾರಣ ಕಾರ್ಯರೂಪದಿ ಮನಸ್ಸಿನಲ್ಲಿ ಪರಿಣಮಿಸುವಿಕೆ.

**ತ್ರಿಪುಟತಾಳ** :– ಗುಣಧರ್ಮ ಕಾರ್ಯ ಪ್ರಾಪ್ತಿ ವಿಷಯ ಪ್ರಾರ್ಥನೆ.

**ಅಟ್ಟತಾಳ** :– ಮನೋವೇಗ ಸ್ತೋತ್ರ ಸಂಗೀತ ತಾಳ ಕುಣಿತ.

**ಆದಿತಾಳ** :– ಸ್ತೋತ್ರಾನಂದದಲ್ಲಿ ನಲಿದಾಡುವಿಕೆ ಮತ್ತು ಸ್ವಲ್ಪ ಹೆಚ್ಚಿನ ವೇಗ ಕುಣಿತ.

ಸುಳಾದಿಯ ಸ್ವರೂಪದ ಬಗ್ಗೆ ಬೆಳಕಿಗೆ ಬಂದಿರುವ ವಿಷಯಗಳನ್ನು ಪರಿಶೀಲಿಸಿದರೆ ಒಮ್ಮೆ ಹುಲುಜೂರು ಕೃಷ್ಣಾಚಾರ್ಯರು "ಕರ್ನಾಟಕ ಸಂಗೀತವೂ ದಾಸಕೂಟವೂ" ಎಂಬ ತಮ್ಮ ಗ್ರಂಥದಲ್ಲಿ ಸುಳಾದಿಯ ಸ್ವರೂಪವನ್ನು ಸಾಕಷ್ಟು ಪರಿಚಯ ಮಾಡಿ ಕೊಟ್ಟಿದ್ದರೂ ಇತ್ತೀಚಿಗೆ(೧೯೮೫) ಈ ಕ್ಷೇತ್ರದಲ್ಲಿ ವಿಶೇಷವಾಗಿ ಅಧ್ಯಯನ ನಡೆಸಿರುವ ಡಾ. ರಾ. ಸತ್ಯನಾರಾಯಣ ಅವರು ತಮ್ಮ ಲೇಖನವೊಂದರಲ್ಲಿ ಶ್ರೀ ಪುರಂದರದಾಸರ ಸಾಹಿತ್ಯ XI ೧೯೬೫ :ಕೃಷ್ಣ ಲೀಲಾ, ಇಂಗ್ಲೀಷ್ ಲೇಖನ(ಪುಟ ೬೮–೭೮) ಸುಳಾದಿಯ ಹೆಸರಿನ ಉಲ್ಲೇಖವೇನೋ 'ಸೂಡಾದಿ' ಎಂಬುದಾಗಿ, ಅಗ್ಗಳ(ಕ್ರಿ.ಶ.೧೧೮೯) ಮೊದಲ್ಗೊಂಡು ಗೋವಿಂದ ವೈದ್ಯನವರೆಗೆ

(ಕ್ರಿ.ಶ. ೧೬೪೫) ಅನೇಕ ಕಾವ್ಯಗಳಲ್ಲಿ ಪ್ರಯೋಗವಾಗಿರುವುದನ್ನು ಗಮನಕ್ಕೆ ತಂದಿರುವರು. ಇದರ ಲಕ್ಷಣವನ್ನು ಪುಂಡಲಿಕ ವಿಠಲನು (೧೫೬೯-೧೫೭೭) ಹೀಗೆ ಹೇಳಿರುವನು...

**ಧ್ರುವಕೊ ಮಂಠ ಕಶ್ಚೈವ ರೂಪಕೋ ಝಂಪ ಕಸ್ತಥಾ ।**

**ತ್ರಿಪುಟಶ್ಚಾಡ್ಡ ತಾಲಾಖ್ಯ ಶ್ವೇಕ ತಾಲ ಇತಿಕ್ರಮಾತ್ ।**

**ಸಪ್ತ ಸೂಡಾದಿರಿತ್ಯಾಕ್ತೋ ಲಕ್ಷ ಲಕ್ಷಣ ಕೋವಿದೈ : ॥** (ನರ್ತನ ನಿರ್ಣಯ)

ಈ ಸೂತ್ರವನ್ನು ಸ್ಥೂಲವಾಗಿ ಸಮೀಕ್ಷಿಸಿದರೆ "ಸುಳಾದಿ" ಎಂಬ ಪ್ರಕಾರವು ಸಪ್ತ ಸುಡಾದಿಗಳ ಆಧಾರದ ಮೇಲೆ ರಚಿತವಾದುದೆಂದು ಸ್ಪಷ್ಟವಾಗುತ್ತದೆ. ಈ ತಾಳಗಳು ಯಾವುದೆಂದರೆ ೧.ಧ್ರುವ, ೨.ಮಟ್ಟ, ೩.ರೂಪಕ, ೪.ಝಂಪ, ೫.ತ್ರಿಪುಟ, ೬.ಅಟ್ಟ ಮತ್ತು ೭.ಆದಿ ತಾಳಗಳು. ಇವು ಕ್ರಮವಾಗಿ ಬರಬೇಕೆಂಬ ನಿರ್ಬಂಧವೂ ಉಂಟು. ಕಟ್ಟಕಡೆಯ 'ಜತೆ'ಯ ಹೆಸರನ್ನು ಹೇಳವದಿದ್ದರೂ, ಪ್ರಯೋಗದಲ್ಲಿರುವುದನ್ನು ಕಾಣಬಹುದು. ಒಮ್ಮೊಮ್ಮೆ ಕೆಲವು ಸುಳಾದಿಗಳಲ್ಲಿ 'ಜತೆ' ಇಲ್ಲದಿರುವುದನ್ನು ಕಂಡರೆ ಇದು ಐಚ್ಛಿಕವಿರಬಹುದೇ ಎಂಬ ಸಂಶಯ ಉದ್ಭವವಾಗುತ್ತದೆ. ಹರಿದಾಸರಲ್ಲಿ ಶ್ರೀಪಾದರಾಜರು ಮೊದಲ್ಗೊಂಡು ಅನೇಕರು ಸುಳಾದಿಗಳನ್ನು ಬರೆದಿದ್ದರೂ ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಈ ವರೆಗೆ ಪುರಂದರದಾಸರ ಹೆಸರು ಹಾಗೂ ಅವರ ಸುಳಾದಿಗಳು ಉದಾಹರಣೆಗಳು ಕಂಡುಬರುತ್ತವೆ. "ಸಂಗೀತ ಸಾರಾಮೃತ"ದ ಕರ್ತೃವಾದ ತುಲ್ಜಾಜಿ ಮಹಾರಾಜನು ಸುಳಾದಿಯ ಲಕ್ಷಣವನ್ನು ನಿರ್ದೇಶಿಸುವಲ್ಲಿ ಪುರಂದರದಾಸರ ಹೆಸರನ್ನು ಹೇಳಿರುತ್ತಾನೆ.

**ಇತಿ ಸಾಲಿಗೆ ಸೂಡಸ್ಥ ಗೀತಾನಾಂ ಲಕ್ಷ ಕೀರ್ತನಂ**

**ಶ್ರೀ ಪುರಂದರ ದಾಸಾದ್ಯೈರಭಿಯುಕ್ತೈ : ಪುರಾತನೈ :**

**ಪ್ರಯುಕ್ತೆಷು ಪ್ರಸಿದ್ದೆಷ್ಟು ಲಕ್ಷ್ಯೇಷು ವಿವಿಧೇಷ್ವ ಪಿ**

**ಧ್ರುವಾ ದಿ ಷುತ್ವದುಕ್ತಾನಿ ಲಕ್ಷಣಾನಿ ಮಹಾಮತೇ**

**(ಅ-XII, ಪು-೧೫೦)**

"ಸಂಗೀತ ಸಂಪ್ರದಾಯ ಪ್ರದರ್ಶಿನಿ"ಯ ಕರ್ತೃವಾದ ಸುಬ್ಬುರಾಮ ದೀಕ್ಷಿತರು (ಕ್ರಿ.ಶ. ೧೮೨೯ – ೧೯೧೬) ತಮ್ಮ ಗ್ರಂಥದಲ್ಲಿ ಪುರಂದರದಾಸರ ಎರಡು ಲಕ್ಷವಾಗಿ ಉದಾಹರಿಸಿರುವರು. ಇವುಗಳನ್ನೆಲ್ಲ ಗಮನಿಸಿದರೆ ಸುಳಾದಿಯ ಪ್ರಾಚೀನತೆ ಅದರ ತಾಳಮಾಲಿಕೆಯ ನಿಯತತೆ ಮತ್ತು ಪುರಂದರದಾಸರ ಪ್ರಾಶಸ್ತ್ಯಗಳನ್ನೆಲ್ಲ ಪ್ರಕಟವಾಗುತ್ತದೆ.

-----

ಅಧ್ಯಾಯ – ೪

# ಪುರಂದರದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ, ಸಾಮಾಜಿಕ ಮೌಲ್ಯಗಳು

**"ಕರ್ನಾಟಕ ಸಂಗೀತದ ಪಿತಾಮಹ"** ಎಂದು ಹೆಸರಾದವರು ಪುರಂದರದಾಸರು. ದಾಸ ಸಾಹಿತ್ಯದ ಅನೇಕ ಪ್ರಮುಖರಲ್ಲಿ ಮುಖ್ಯವಾಗಿ ಪುರಂದರದಾಸರು ಸಂಗೀತದ ಮೂಲಕ ಭಕ್ತಿ ಮಾರ್ಗವನ್ನು ಬೋಧಿಸಿದವರು. ಪುರಂದರದಾಸರ ಎಲ್ಲಾ ಕೀರ್ತನೆಗಳು ಪುರಂದರ ವಿಠ್ಠಲನನ್ನು(ವಿಷ್ಣು) ನಮಿಸುತ್ತಾ ಕೊನೆಗೊಳ್ಳುತ್ತವೆ. ಸಾವಿರಾರು ಕೀರ್ತನೆಗಳನ್ನು ರಚಿಸಿದ ಪುರಂದರದಾಸರ ಸುಮಾರು ೧೦೦೦ ಕ್ಕೂ ಹೆಚ್ಚು ಕೀರ್ತನೆಗಳು ಇಂದಿಗೂ ಉಳಿದಿವೆ.

## ಪುರಂದರದಾಸರು(೧೪೮೪–೧೫೬೪):

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಶೀಲಿಸಿದರೆ ಒಂದೊಂದು ಪ್ರಕಾರಕ್ಕೂ ಒಬ್ಬೊಬ್ಬ ಪ್ರತಿನಿಧಿಗಳು ಕಂಡುಬರುತ್ತಾರೆ. ಚಂಪುಗೆ ಪಂಪ, ರಗಳೆಗೆ ಹರಿಹರ, ಷಟ್ಪದಿಗೆ ಕುಮಾರವ್ಯಾಸ, ವಚನಕ್ಕೆ ಬಸವಣ್ಣ ಮೊದಲಾದವರು ಹೇಗೋ, ಹಾಗೆ ಕೀರ್ತನೆಗೆ ಪುರಂದರದಾಸರು ಪ್ರತಿನಿಧಿಗಳಾಗಿದ್ದಾರೆ. ವ್ಯಾಸರಾಯರ ಶಿಷ್ಯರಾಗಿ ಮಿನುಗಿದ ಎರಡು ನಕ್ಷತ್ರಗಳಲ್ಲಿ ಒಬ್ಬರು ಪುರಂದರದಾಸರು ಇನ್ನೊಬ್ಬರು ಕನಕದಾಸರಾಗಿದ್ದಾರೆ. ಇವರಿಬ್ಬರೂ ಹರಿದಾಸ ಸಾಹಿತ್ಯದ ಅಶ್ವಿನೀದೇವತೆಗಳೆಂದು ಖ್ಯಾತಿಗೊಂಡಿದ್ದಾರೆ. ಈ ಇಬ್ಬರ ಸಾಧನೆ, ಸಿದ್ಧಿಯಿಂದ ಐತಿಹಾಸಿಕ ಮಹತ್ವವನ್ನು ಕೀರ್ತನೆಗೆ ಸಾಹಿತ್ಯ ಪಡೆದುಕೊಂಡಿದೆ. ದಾಸ ಸಾಹಿತ್ಯದ ಶಿಖರದಂತಿರುವ ಪುರಂದರದಾಸರ ವೈಯಕ್ತಿಕ ಜೀವನದ ಬಗ್ಗೆ ಖಚಿತವಾದ ಮಾಹಿತಿ ಕೊಡುವುದು ಕಷ್ಟವಾಗಿದೆ. ವಿದ್ವಾಂಸರಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಪುರಂದರದಾಸರು ಹುಟ್ಟಿದ ವರ್ಷದ ಬಗ್ಗೆಯೂ ಭಿನ್ನಾಭಿಪ್ರಾಯಗಳಿದ್ದು ಇವರು ಬಾಳಿದ ಕಾಲದ ದೃಷಿಯಿಂದ ೧೫ನೆಯ ಶತಮಾನದ ಉತ್ತರಾರ್ಧದ ಮೊದಲ ಭಾಗದಲ್ಲಿದ್ದರೆಂದು ಅಂದರೆ ೧೫೬೫ ಎಂದು ಒಟ್ಟಾಭಿಪ್ರಾಯದಲ್ಲಿ ಹೇಳಬಹುದಾಗಿದೆ. ಇವರ ಹುಟ್ಟಿದ ಪೂರ್ವಾಶ್ರಮದ ಹೆಸರು

'ಶ್ರೀನಿವಾಸ ನಾಯಕ' 'ಪುರಂದರ ಘಡ'ದ ವರದಪ್ಪನ ಮಗನಾಗಿ ಜನಿಸಿದರು. ತಂದೆಯಂತೆ ಇವರೂ 'ನವಕೋಟಿ ನಾರಾಯಣ' ವೆನಿಸಿ ಶ್ರೀಮಂತರಾಗಿದ್ದರು. ಇವರ ಹೆಂಡತಿ ಸರಸ್ವತಿ ಬಾಯಿಯ ದೈವ ಭಕ್ತಿಯ ಪ್ರಭಾವದಿಂದ ಶ್ರೀನಿವಾಸ ನಾಮಕರು ಜ್ಞಾನೋದಯ ಪಡೆದು ಸಕಲ ಸಂಪತ್ತನ್ನು ದಾನಮಾಡಿ, ವ್ಯಾಸರಾಯರಿಂದ ದಾಸದೀಕ್ಷೆಯನ್ನು ಪಡೆದು ಹರಿಭಕ್ತರಾದರೆಂದು ತಿಳಿದುಬರುತ್ತದೆ. ಪುರಂದರದಾಸರೇ "ಆದದ್ದೆಲ್ಲಾ ಒಳಿತೇ ಆಯಿತು, ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು". ಎಂದು ತಮ್ಮ ಜ್ಞಾನೋದಯಕ್ಕೆ ಕಾರಣಳಾದ ಹೆಂಡತಿಯನ್ನು ಮುಕ್ತ ಕಂಠದಿಂದ ಕಾವ್ಯಮಯವಾಗಿ ಹಾಡಿದ್ದಾರೆ. "ಪುರಂದರ ವಿಠಲ" ಎಂಬ ಅಂಕಿತದಲ್ಲಿ ತಮ್ಮ ಕೀರ್ತನ ಕೈಂಕರ್ಯವನ್ನು ನೆರವೇರಿಸಿದ್ದಾರೆ. ಇವರ ಸಾಧನೆಯನ್ನು ಮೆಚ್ಚಿಕೊಂಡ ಗುರು ವ್ಯಾಸರಾಯರೇ "ದಾಸರೆಂದರೆ ಪುರಂದರದಾಸರಯ್ಯ" ಎಂದು ಹೊಗಳಿದ್ದಾರೆ. ಅವರು ಬರೆದ ಕೀರ್ತನೆಗಳನ್ನು 'ಪುರಂದರೋಪನಿಷತ್ತು' ಎಂದು ಗೌರವಿಸಲಾಗಿದೆ. ಇವರೇ ಹೇಳಿಕೊಂಡಿರುವಂತೆ ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಕೀರ್ತನೆಗಳೆಂದು ಹೇಳಿದರೂ, ಈಗ ಸಿಕ್ಕಿರುವ ಕೀರ್ತನೆಗಳ ಸಂಖ್ಯೆ ಒಂದು ಸಾವಿರಕ್ಕೂ ಅಧಿಕವೆಂದು ಹೇಳಬಹುದಾಗಿದೆ.

'ದಾಸರೆಂದರೆ ಪುರಂದರ ದಾಸರಯ್ಯ' ಎಂದು ತಮ್ಮ ಗುರುಗಳಾದ ವ್ಯಾಸರಾಯರಿಂದಲೇ ಹೊಗಳಿಸಿಕೊಂಡ ಪುರಂದರದಾಸರು ತಮ್ಮ 'ಸರಳ ಶೈಲಿಯಿಂದ' ಸಂಗೀತ ಮಾಧುರ್ಯದಿಂದ, ವಸ್ತುವಿನ ವೈವಿಧ್ಯತೆಯಿಂದ, ಜನಮನವನ್ನು ಸೂರೆಗೊಂಡ ದಾಸ ಶ್ರೇಷ್ಠರು. "ಪುರಂದರದಾಸರ ಪ್ರಸನ್ನವಾಣಿ ದಾಸ ಸಾಹಿತ್ಯಕ್ಕೆ ಅಮರತ್ವವನ್ನು ವೈವಿಧ್ಯತೆಯನ್ನು, ವೈಶಿಷ್ಟವನ್ನು, ವೈಶಾಲ್ಯವನ್ನು, ದೊರಕಿಸಿಕೊಟ್ಟಿತು. ಪುರಂದರದಾಸರ ರಚನೆಗಳಲ್ಲಿ ಸಂಗೀತದ ಮಾಧುರ್ಯವೂ, ಸಾಹಿತ್ಯದ ಸ್ವಾರವೂ, ಧರ್ಮದ ಸಂದೇಶವು, ಸರಿಸಮನಾಗಿ ಬೆರೆತು ಎಲ್ಲರಿಗೂ ಪ್ರಿಯವಾದವು." ಎಂದು ಜಿ. ವರದರಾಜರಾವ್ರವರು 'ಹರಿದಾಸ ಹೃದಯ' ಗ್ರಂಥದಲ್ಲಿ ಹೇಳಿರುವುದು ಸಮಂಜಸವಾದುದ್ದಾಗಿದೆ. ಮತ್ತೊಂದೆಡೆ ಅವರ ಕೃತಿಗಳಲ್ಲಿ ಸಾಹಿತ್ಯ, ಸಂಗೀತ, ಸ್ವಧರ್ಮ, ನಿಷ್ಠೆಗಳ ತ್ರಿವೇಣಿ ಸಂಗಮವನ್ನು ಕಾಣಬಹುದಾಗಿರುವುದರಿಂದಲೇ 'ಕರ್ನಾಟಕ ಸಂಗೀತ ಪಿತಾಮಹ' ಎಂದು ಎಲ್ಲರೂ ಸ್ಮರಿಸುವುದು ಹೀಗೆ ಕೀರ್ತನಾ ಸಾಹಿತ್ಯದಲ್ಲಿ ಅತ್ಯುನ್ನತ ಮಟ್ಟವನ್ನೇರಿದವರು ಪುರಂದರದಾಸರು.

## ಪುರಂದರದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ ಮೌಲ್ಯಗಳು:

ಪುರಂದರದಾಸರ ರಚನೆಗಳು ಆತ್ಮೀಯವೂ, ಸ್ವಾನುಭವ ಪ್ರಮಾಣ್ಯವೂ ಆಹ್ಲಾದಕಾರಿಣಿಯಿಂದಲೂ ಸಾಹಿತ್ಯಿಕ ಮೌಲ್ಯವನ್ನು ಪಡೆದುಕೊಂಡಿವೆ. ಈ ಸಾಹಿತ್ಯಿಕ ಮೌಲ್ಯವನ್ನು ಮನವರಿಕೆಯಾಗಲು ಭಕ್ತ ಮತ್ತು ಭಗವಂತನ ಸಂಬಂಧದ ಪಂಚವಿಧ ಭಾವನೆಗಳಾದ ಶಾಂತ, ದಾಸ್ಯ, ಸಖ್ಯ, ಮಧುರ ಮತ್ತು ವಾತ್ಸಲ್ಯಗಳು ಬಹಳ ನೆರವಾಗುತ್ತವೆ.

ಕೃಷ್ಣನ ಬಾಲಲೀಲೆಗಳನ್ನು ವಾತ್ಸಲ್ಯ ಭಾವದ ಗೀತೆಗಳನ್ನು ಬರೆದ ಕೀರ್ತನಕಾರರಲ್ಲಿ ಪುರಂದರದಾಸರಿಗೆ ಪ್ರಥಮ ಸ್ಥಾನ ಸಲ್ಲುತ್ತದೆ. ಹರಿದಾಸರಿಗೆ ಬಾಲಗೋಪಾಲನೆಂದರೆ ಬಹಳ ಪ್ರಿಯ. ಆತನ ಆಟ, ಪಾಠ, ತುಂಟಾಟಗಳನ್ನು ವರ್ಣಿಸುವುದರಲ್ಲಿ ಪ್ರತಿಯೊಬ್ಬರಿಗೂ ಆಸಕ್ತಿ. ಆದರೆ ಪುರಂದರದಾಸರನ್ನು ಮೀರಿಸುವವರು ಯಾರೂ ಇಲ್ಲ ಎನ್ನಬಹುದು. ಆ ಕಾರಣಿಕ ಶಿಶುವಿನ ಚಲನವಲನವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ.

ಒಮ್ಮೆ ಆ ಬಾಲಕನನ್ನು ನೇರವಾಗಿ ಚಿತ್ರಿಸಿದರೆ. ಇನ್ನೊಮ್ಮೆ ಗೋಪಿಯರ ಪಾತ್ರ ಮಾಧ್ಯಮದ ಮೂಲಕ ನಮ್ಮ ಹೃದಯವನ್ನೇ ಸೂರೆಗೊಳ್ಳುತ್ತಾರೆ.

**"ಕೂಸನು ಕಂಡಿರಾ ಜ್ಞಾನಿಗಳೆಲ್ಲ**

**ಕೂಸನು ಕಂಡಿರಾ ಸಾಸಿರನಾಮದ**

**ಶತಕೋಟಿ ತೇಜವ ಸೂಸುವ**

**ಸುಖಮಯ ಜ್ಞಾನದ ಕೂಸು"**

ಎಂದು ಭಗವಂತನ ಶಿಶು ರೂಪವನ್ನು ಆತನ ಲೌಕಿಕ ಗುಣಗಳನ್ನು ಏಕಕಾಲದಲ್ಲಿಯೇ ಪ್ರಸ್ತಾಪಿಸುವರು. ಆ ಮುದ್ದು ಗೋಪಾಲನನ್ನು ಎತ್ತಿ ಆಡಿಸುವ ಪುಣ್ಯ ಯಶೋಧೆಗೆ ಮಾತ್ರ. "ಗೋಪಿಯ ಭಾಗ್ಯವಿದು ಶ್ರೀಪತಿ ತಾ ಶಿಶು ರೂಪದಲ್ಲಿರುವುದು" ಎಂದು ಹೊಗಳಿ ಹಿಗ್ಗಿದರೆ, ಜಗದೋದ್ಧಾರನ ಆಡಿಸಿದಳೆ ಶೋಧೆ" ಎಂದು ಆತನ ಅತಿಶಯವನ್ನೆಲ್ಲಾ ಪಂಕ್ತಿ ಪಂಕ್ತಿಯಲ್ಲಿಯೂ ಹೊಗಳಿ ತಣಿಯುವರು ಆ ಬಾಲಕನನ್ನು ಪಡೆದ ಯಶೋಧೆಗೆ ಎಷ್ಟು

'ಆನಂದವೋ ಅಷ್ಟೇ ಆತಂಕವೂ ಕಾಡುತ್ತದೆ. ಆ ಮಗುವಿನ ವರ್ತನೆಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಕಂಡು ಬಂದರೂ ಸರಿಯೇ, ಒಡನೆಯೇ ತನ್ನವರೊಡನೆ

**"ಹ್ಯಾಗೆ ಮಾಡಲಿ ಈ ಮಗುವಿಗೇನಾಯಿತೋ**

**ಇದರಾಗಮನ ಬಲ್ಲವರು ತಿಳಿದು ಹೇಳಿ"**

ಎಂದು ಕೋರಿ ಕಳವಳ ಪಡುವಳು

**"ಪೋಗದಿರಲೋ ರಂಗ ಬಾಗಿಲಿಂದಾಚೆಗೆ**

**ಭಾಗವತರು ಕಂಡರೆ ಕೊಂಡೊಯ್ಯರೋ"**

ಎಂದು ಬಗೆಬಗೆಯಾಗಿ ಬೇಡಿಕೊಳ್ಳುವಳು. ತುಂಟ ಕೃಷ್ಣ ಅಷ್ಟು ಸುಲಭವಾಗಿ ತಾಯಿಯ ಮಾತಿಗೆ ಕಿವಿಕೊಡುವವನಲ್ಲ. ಗೋಪ, ಗೋಪಿಯರೆಲ್ಲ ಅವನ ಒಡನಾಡಿಗಳು, ಗೋಕುಲವೆಲ್ಲ ಅವನ ಪಾಲೇ, ಎಷ್ಟು ಬುದ್ಧಿಯ ಮಾತನ್ನು ಹೇಳಿದರೂ ಕೇಳದಿರಲು ಗುಮ್ಮನನ್ನು ಕರೆಯುವೆನೆಂದೋ, ಬೂಚಿ ಬಂದಿದೆಯೆಂದೋ ಬೆದರಿಸುವಳು. ಆ ಮಗು ಅಮ್ಮನ ಬಳಿ ಗುಮ್ಮನ ಕರೆಯದಿರಲೆಂದು ಗೋಗರೆಯುವ ಪರಿಯನ್ನು ನೋಡಿ

**"ಗುಮ್ಮನ ಕರೆಯದಿರೇ ಅಮ್ಮ ನೀನು**

**ಸುಮ್ಮನೆ ಇರುವೆನು ಅಮ್ಮಿಯ ಬೇಡೆನು**

**ಮಮ್ಮು ಉಣ್ಣುತ್ತೇನೆ ಅಮ್ಮ ಅಳುವುದಿಲ್ಲ**

**------------------------**

**ಮಗನ ಮಾತನು ಕೇಳುತ ಗೋಪಿ ದೇವಿ**

**ಮುಗುಳು ನಗೆ ನಗುತ**

**ಜಗದೊಡೆಯ ಶ್ರೀ ಪುರಂದರ ವಿಠಲನ**

**ಬಿಗಿದಪ್ಪಿಕೊಂಡಳು ಮೋಹದಿಂದಾಗಿ"**

ಈ ಕೀರ್ತನೆಯು ಗೇಯತೆಯಿಂದಲೂ ಶ್ರೇಷ್ಠವಾಗಿದೆ. ಲಯ ಮತ್ತು ಭಾಷೆಗಳೆರಡೂ ಮುಗ್ಧ ಶಿಶು ಲೋಕವನ್ನು ನಿರ್ಮಿಸಿ ಬಿಡುತ್ತೇವೆ. ಮಗನ ತುಂಟಾಟದಿಂದ ಬೇಸರಗೊಂಡ ತಾಯಿಯನ್ನು ರಮಿಸುವ ಇಲ್ಲಿನ ಈ ಬಾಲ ಭಾಷೆ ಸಹಜವಾದದ್ದು. ಮತ್ತು ಮುದ್ದಾದುದು. ಬಲ ಭಾಷೆಯ ವಿಶಿಷ್ಟತೆಯಿಂದ ಮಿರುಗುಗೊಂಡಿದೆ. ತುಂಟ ಮಕ್ಕಳನ್ನು ಹೆದರಿಸಲು ತಾಯಂದಿರು ಬಳಸುವ ಗುಮ್ಮನ ಕಲ್ಪನೆಯಿಂದಲೂ ಕೂಡಿ ಅತ್ಯಂತ ಸಹಜವಾದುದು.

ತಾಯಿಯ ಬಳಿಗೆ ಬಂದ ಮಗು ಗುಮ್ಮನ ಕರೆಯದಿರೆ ಎಂದು ಬಳಸುವ ಮಾತಿನಲ್ಲಿರುವ ಆತ್ಮೀಯತೆ, ಅಕ್ಕರೆಗಳು, ಗುಮ್ಮನನ್ನು ಕರೆದರೆ ಹೇಗೋ ಎಂಬ ದಿಗಿಲುಗಳನ್ನು ಅಭಿನಯಿಸುತ್ತವೆ. ಇಲ್ಲಿನ ಪಲ್ಲವಿ, ಅನುಪಲ್ಲವಿಯೂ ಪುನರಾವರ್ತನೆಗೊಂಡು ಅರ್ಥವನ್ನು ತೀಡಿ ತೀಡಿ ಹೊಳಪುಗೊಳಿಸುತ್ತದೆ.

ತಾಯಿಯ ಬಳಿ ಮಗು 'ಗುಮ್ಮನ ಕರೆಯದಿರೆ' ಎಂದು ಗೊಗರೆಯುವ ಮುದ್ದು ಚಿತ್ರವಿದೆ. ಅನುಪಲ್ಲವಿಯಲ್ಲಿ ಬರುವ 'ಅಮ್ಮಿ' 'ಮಮ್ಮು ಪದಗಳಿದ್ದು ಸಂಪೂರ್ಣವಾಗಿ ಶಿಶುಲೋಕಕ್ಕೆ ಸಂಬಂಧಿಸಿದ ಪದಗಳಾಗಿವೆ. ಸುಂದರನೂ, ತುಂಟನೂ, ಎಳೆಯನೂ, ಆದ ಮುದ್ದು ಕೃಷ್ಣ ಮುದ್ದು ಮುದ್ದಾಗಿ ಈ ಮಾತುಗಳನ್ನು ಹೇಳುತ್ತಾ 'ಅಮ್ಮ ಅಳುವುದಿಲ್ಲ' ಎಂದು ಭರವಸೆಯನ್ನು ಕೊಡಹೋಗುವುದು ಶಿಶುಲೋಕದ ಯಶಸ್ವೀ ತಂತ್ರವಾಗಿದೆ. ನಿನಗೆ ಕೋಪ ಬರುವುದಾದರೆ ಕಣ್ಣು ಮುಚ್ಚಾಲೆಯ ಆಟಕ್ಕಾಗಿ ಹೆಣ್ಣು ಮಕ್ಕಳ ಕಣ್ಣು ಮುಚ್ಚುವುದಿಲ್ಲ ಎನ್ನುವ ಮಾತಿನ ವ್ಯಂಗ್ಯ ಅರ್ಥಪೂರ್ಣವಾದದ್ದು. ಹೆಣ್ಣು ಮಕ್ಕಳೊಡನಾಡುವ ಚೆಲ್ಲಾಟಕದಕೆ ಕಣ್ಣು ಮುಚ್ಚಾಲೆಯ ಸೋಗು ಸೇರಿಸುವುದು ಇಲ್ಲಿಯ ವೈಶಿಷ್ಟ್ಯ. ಮುಂದುವರಿದು ಮಿಕ್ಕ ಹುಡುಗರನ್ನು ಬಡಿಯುವುದಿಲ್ಲ. ಹಾಗೂ ಅಣ್ಣನನ್ನು ಬಯ್ಯುವುದಿಲ್ಲ ಎಂದು ಭರವಸೆಯನ್ನು ಕೊಡುತ್ತ ತನ್ನ ತುಂಟಾಟದ ನೆನಪನ್ನು ಉಕ್ಕಿಸುತ್ತದೆ. ಮುಂದಿನ ಸಾಲುಗಳು ನಂದಗೋಕುಲದಲ್ಲಿನ ಚಿತ್ರವನ್ನೂ ಅಲ್ಲಿ ಬಾವಿಗೆ ಹಾರಿ, ಕೃಷ್ಣ ನಡೆಸುತ್ತಿದ್ದ ಪವಾಡವನ್ನು ಧ್ವನಿಸುತ್ತವೆ. ತಾನು ಇನ್ನು ಮುಂದೆ ಅಂಥ ಅಪಾಯದ ಕಾರ್ಯಕ್ಕೆ ಕೈ ಹಾಕುವುದಿಲ್ಲವೆಂಬ ನಂಬಿಕೆಯನ್ನು ತಾಯಿಯಲ್ಲಿ ಮೂಡಿಸುವ ಮಗುವಿನ ಯತ್ನವನ್ನು ಬಿಂಬಿಸುತ್ತವೆ. ಮುಂದಿನ ಸಾಲುಗಳಲ್ಲಿ ಹಸುಗಳಿಗೆ ಕರುಗಳನ್ನು ಬಿಡುವುದಿಲ್ಲ ಎಂದು 'ದೇವರಂತೆ ಬಂದು ಠಾವಿಗೆ ಕೂಡಿವೆ' ಎನ್ನುವ ಮಾತಿನಲ್ಲಿ ಶಿಖರ ಸ್ಥಾನವನ್ನು ಮುಟ್ಟಿ ಬಿಡುತ್ತದೆ. ಇಷ್ಟೊಂದು ಅದ್ಭುತವಾಗಿರುವ ಈ ಕೀರ್ತನೆಗೆ ಪ್ರಾಪ್ತವಾಗುವ ನಾಟಕೀಯತೆಯ ತಿರುವನ್ನು ಇಲ್ಲಿ ನೋಡಬಹುದು. ಇಂಥ ಶಿಶುಲೀಲೆಯಲ್ಲಿ ಮಗ್ನನಾದ ಭಗವಂತನನ್ನು ಕಂಡ ಯಾವ ತಾಯಿ ತಾನೆ ಸುಮ್ಮನಿದ್ದಾಳು? ಮೋಹದಿಂದ ಅಕೆ ಜಗದೊಡೆಯನನ್ನೇ ಬಿಗಿದಪ್ಪಿಕೊಂಡಳು ಎಂದು ಈ ಕೀರ್ತನೆ ಮುಗಿಯುತ್ತದೆ. ಈ ಕೀರ್ತನೆಯಲ್ಲಿ ಸಾಂಕೇತಿಕತೆ, ಪ್ರತಿಮಾನಿಷ್ಠತೆ ಚಿತ್ರದ ಸಾಮರ್ಥ್ಯದಿಂದ ಅತ್ಯಂತ

ಯಶಸ್ವಿಯಾಗುತ್ತದೆ. ಕೃಷ್ಣ ಇದಕ್ಕೆ ಒಂದೆರೆಡು ಬಾರಿ ಹೆದರಿದರೂ ಆ ಬಳಿಕ ಅದಕ್ಕೂ ಸಗ್ಗುವವನಲ್ಲ. ಈ ಮಧ್ಯೆ ಕೆಲವು ಗೋಪಿಯರು ಬಂದು ದೂರಿನ ಮಳೆಯನ್ನೇ ಕರೆಯುತ್ತಾರೆ. ಆದರೂ ತಾಯಿಯಲ್ಲವೇ! ಮಗನ ಪಕ್ಷವನ್ನೇ ವಹಿಸಿಕೊಂಡು ಮಾತನಾಡುತ್ತಾಳೆ. ಮನೆಗೆ ಬಂದ ಗೋವಿಂದನನ್ನು ಕಂಡು ಹೊರಗೆ ಹೋಗಿ ಆಡದಿರು ಹರಿಯೇ ಎಂದು ನೊಂದುಕೊಳ್ಳುವ ಮಾತೃ ಸ್ವಭಾವವನ್ನು ಪುರಂದರದಾಸರು ಮರೆತಿಲ್ಲ. ಮಗನ ತುಂಟಾಟವನ್ನು ತಡೆಯಲಾರದ ಯಶೋಧೆ 'ಹಿಡಿದುಕೊಂಡು ಹೋಗಲೋ ಜೋಗಿ' ಎಂದು ಹೆದರಿಸುವುದು ತಪ್ಪಿಸಿಕೊಂಡ ಮಗನನ್ನು ಹುಡುಕುತ್ತ 'ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಂಗನಕಂಡಿರೇನೆ' ಎಂದು ಮನೆಮನೆಗಳಲ್ಲಿ ಮುನಿಸಿಕೊಂಡಿರುವ ತನ್ನ ಕಂದನಿಗಾಗಿ ಹಾತೊರೆಯುವುದು, ಇಗೋ ನವನೀತ ಚೋರ ಸಿಕ್ಕಿದನಮ್ಮ ಎಂದು ವಿಸ್ಮಯಗೊಳ್ಳುವುದು. ಹೀಗೆ ಶ್ರೀ ಕೃಷ್ಣನ ಚಹರೆಗಳನ್ನೆಲ್ಲಾ ಹೇಳಿ ಗೋಕುಲದಲ್ಲೆಲ್ಲ ಹುಡುಕಾಡುತ್ತಾರೆ. ಇಂಥ ಕೀರ್ತನೆಗಳಲ್ಲಿ ಮಗ-ತಾಯಿಯ ವಾತ್ಸಲ್ಯ ಭಾವವು ಸ್ವಭಾವೋಕ್ತಿಯಿಂದ ಕೂಡಿದೆ. "ಕೀರ್ತನಾ ಸಾಹಿತ್ಯದ ಬಂಗಾರದ ಬೆಳಕನ್ನೇ ನಾವು ಈ ಕ್ಷೇತ್ರದಲ್ಲಿ ಕಾಣಬಹುದಾಗಿದೆ" ಎಂದು ಜಿ.ಎಸ್. ಸಿದ್ಧಲಿಂಗಯ್ಯನವರ ಮಾತು ಗಮನಾರ್ಹ.

ದಾಸರ ಕೀರ್ತನೆಗಳಲ್ಲಿ ಸಮರ್ಪಣ ಭಾವವೂ ಪ್ರಮುಖ ಸ್ಥಾನ ಪಡೆದುಕೊಂಡಿದೆ. 'ದಾಸನ ಮಾಡಿಕೋ' 'ಕಂಡು ಕಂಡು ನೀಯನ್ನ ಕೈ ಬುಡುವರೆ' ಎಂದು ಹರಿಯನ್ನು ಆರ್ದತೆಯಿಂದ ಬೇಡುವ ದಾಸರು ಇನ್ನೊಮ್ಮೆ, **'ನೀನ್ಯಾಕೋ ನಿನ್ನ ಹಂಗ್ಯಾಕೋ' 'ನಿನ್ನ ನಾಮದ ಬಲವೊಂದಿದ್ದರೆ ಸಾಕೋ' 'ಎನಗೂ ಅಣೆ ರಂಗ ನಿನಗೂ ಆಣೆ'** ಎಂದೇ ಸವಾಲೆಸೆಯುತ್ತಾರೆ. ಇಂಥಹ ಕೀರ್ತನೆಗಳಲ್ಲಿ ಹರಿಯ ಸಂಪ್ರದಾಯಿಕ ರೂಪವನ್ನೇ ವರ್ಣಿಸಲಾಗಿದ್ದರೂ ಅಲ್ಲಿನ ರೂಪಕ, ಉಪಮೆಗಳು, ಶಬ್ದ ಚಿತ್ರಗಳಿಂದ ಅಪೂರ್ವವಾಗಿವೆ. ಸಂಸರದ ನಿಸ್ಸಾರತೆಯನ್ನು ಹೇಳಿದರೂ **'ಮಾನವ ಜನ್ಮ ದೊಡ್ಡದು'** ಅದನ್ನು **'ಹಾನಿ ಮಾಡಬೇಡಿ ಹುಚ್ಚಪ್ಪಗಳಿರ'** ಎಂದು ಎಚ್ಚರಿಸಿ. **'ಈಸಬೇಕು ಇದ್ದು ಜೈಸಬೇಕು'** ಎಂದು ಬೋಧಿಸುತ್ತಾರೆ. **'ಮಡಿ ಮಡಿಯೆಂದಡಿಗಡಿಗ್ಹಾರುವಿ' 'ಉದರ ವೈರಾಗ್ಯವಿದು'** ಕೀರ್ತನೆಗಳು ತನ್ನ ಕಾಲದ ಜನರ ಬೂಟಾಟಿಕೆಯನ್ನು ಕುರಿತಂಥವು. ಎಲ್ಲರೂ ಮಾಡುವುದು ಹೊಟ್ಟೆಗಾಗಿ **'ಲೋಳ ಲೊಟ್ಟೆ ಎಲ್ಲಾ ಲೊಳಲೊಟ್ಟೆ'** ಕೀರ್ತನೆಗಳಲ್ಲಿನ ಅಭಿವ್ಯಕ್ತಿ ಮತ್ತು ಭಾಷೆಯ ಸಹಜತೆಯಿಂದ ಸಾಹಿತ್ಯಿಕ ಮೌಲ್ಯವನ್ನು ಹೆಚ್ಚಿಸುತ್ತದೆ.

ಕವಿ ಸಹಜವಾದ ಹೃದಯವನ್ನು ಪುರಂದರದಾಸರ ಕೃತಿಗಳಲ್ಲಿ ಅನಾಯಾಸವಾಗಿ ಕಂಡುಬರುವ ಅಲಂಕಾರದಲ್ಲಿ ಕಾಣಬಹುದಾಗಿದೆ. **'ಕಲ್ಲು ಸಕ್ಕರೆ ಕೊಳ್ಳಿರೋ ನೀವೆಲ್ಲರೂ'** ಎಂದು ದೇವರ ನಾಮವನ್ನು ಹೇಳುವಾಗ, **'ರೊಕ್ಕ ಎರಡಕ್ಕೂ ದುಃಖ ಕಾಣಕ್ಕ', 'ಗಿಳಿಯ ಪಂಜರದೊಳಗಿಲ್ಲ', ಡೊಂಕು ಬಾಲದ ನಾಯಕರೆ', 'ಜಾಲಿಯ ಮರದಂತೆ ಧರೆಯೊಳು ದುರ್ಜನರು',** ಮುಂತಾದ ಕೀರ್ತನೆಗಳ ಸಾಂಕೇತಿಕತೆ, ಧ್ವನಿ, ಉಪಮೆ, ರೂಪಕಗಳ ಬಳಕೆಯ

ಸಾಮರ್ಥ್ಯಗಳು ಸಾಹಿತ್ಯಿಕ ಮಗ್ಗಲುಗಳನ್ನೆ ನಮ್ಮ ಕಣ್ಣು ಮುಂದೆ ತೆರೆದಿಡುತ್ತವೆ. ಅವರು ಬಳಸಿರುವ ಕೆಲವು ಜಾಣ್ನುಡಿಗಳತ್ತ ನೋಡಿದರೆ ಅವರ ಲೋಕಾನುಭವ ಎಷ್ಟು ವಿಶಾಲವಾದುದು ಎನಿಸುತ್ತದೆ. **'ನೆಂಟರಿಗೆ ಸಾಲ ಕೊಡುವಾ ಮೂರ್ಖ', 'ಮಡದಿ ಹುಟ್ಟದ ಮನೆಯೊಳಿರುವವನು ಮೂರ್ಖ' 'ದುಗ್ಗಾಣಿ ಎಂಬುದು ದುರ್ಜನಸಂಗ' ದುಗ್ಗಾಣಿ ಬಲು ಕೆಟ್ಟದಣ್ಣ' 'ರೊಕ್ಕ ಎರಡಕ್ಕೂ ದುಃಖ ಕಾಣಕ್ಕ' 'ಕೆಟ್ಟು ನೆಂಟರ ಸೇರುವುದು ಕಠಿಣ'** ಎಂಬ ಮಾಣಿಕ್ಯ ರಾಶಿಯನ್ನು ಕಂಡರೆ ಅವರಿಗಿದ್ದ ನಿತ್ಯ ಜೀವನದ ನಿಕಟ ಪರಿಚಯ ಪ್ರಕಟವಾಗುತ್ತದೆ.

ಹೀಗೆ ಉಪಮಾನ, ರೂಪಕಾಲಂಕಾರಗಳನ್ನು, ಜಾಣ್ನುಡಿಗಳನ್ನು, ಪೌರಾಣಿಕ ಉಪಮಾನ, ಸ್ವಭಾವೋಕ್ತಿ, ಧ್ವನಿ, ಶಬ್ಧ ಚಿತ್ರಣಗಳನ್ನು ಬಹಳ ಪರಿಣಾಮಕಾರಿಯಾಗಿ ಬಳಸಬಲ್ಲರು. ಕಣ್ಣೆದುರು ಕಂಡು ಬಂದ ಯಾವ ಸಾಮಾನ್ಯ ಚಿತ್ರವಾಗಲಿ, ಸಂಗತಿಯಾಗಲಿ, ತಮ್ಮ ಉದ್ದೇಶಕ್ಕೆ ತಕ್ಕಂತೆ ಸಾದೃಶ್ಯವಾಗಿ ಪ್ರಯೋಗಿಸಬಲ್ಲ ಅವರ ಪ್ರತಿಭೆ ಪ್ರಶಂಸನೀಯವಾದದ್ದು. ಅವರು ಆಡಿದ ಮಾತು, ಹಾಡಿದ ಹಾಡುಗಳು ಸಹಜವಾಗಿ ಭಾವಪೂರ್ಣವಾಗಿದ್ದು ಭಾವಗೀತಾತ್ಮಕವಾಗಿ ಅತ್ಯುತ್ತಮ ಸಾಹಿತ್ಯವಾಗಬಲ್ಲದು ಎನ್ನುವುದಕ್ಕೆ ಅವರ ಕೀರ್ತನೆಗಳು ನಿತ್ಯ ಸಾಕ್ಷಿಗಳಾಗಿವೆ.

## ಪುರಂದರದಾಸರ ಕೀರ್ತನೆಗಳಲ್ಲಿ ಸಾಮಾಜಿಕ ಮೌಲ್ಯಗಳು:

ಪುರಂದರದಾಸರ ಕೀರ್ತನೆಗಳ ವ್ಯಾಪ್ತಿ ಬಾಲಲೀಲೆ ವಾತ್ಸಲ್ಯ ಸೀಮಿತವಾಗುವುದಿಲ್ಲ. ತಮ್ಮ ಸುತ್ತ ಮುತ್ತಲಿನ ಸಮಾಜ ಜೀವನದ ಕಡೆಗೂ ಅವರ ಲೋಕಾನುಭವದ ದೃಷ್ಟಿ ಹರಡಿದೆ. ವಚನಕಾರರಂತೆ ಅವರು ಯಾವ ಸಾಮಾಜಿಕ ಕ್ರಾಂತಿಯನ್ನು ತರಲಿಲ್ಲವಾದರೂ ಮಾನವರ ನಡೆ–ನುಡಿಗಳ ಓರೆಕೋರೆಗಳನ್ನು ಕುರಿತು ಜೀವನದ ನಿರ್ವಹಣೆಗೆ ಎಷ್ಟು ಅಮೂಲ್ಯವಾದ ಸಲಹೆಗಳನ್ನು ನೀಡಿದರೆಂಬುದು ವಿದಿತವಾಗುತ್ತದೆ. ಪುರಂದರದಾಸರು ಬೂಟಾಟಿಕೆಯನ್ನು ಡಂಭಾಚಾರವನ್ನು ಬಹಳ ಕಟುವಾಗಿ ಖಂಡಿಸಿದ್ದಾರೆ.

**"ಉದರ ವೈರಾಗ್ಯವಿದು ನಮ್ಮ**

**ಪದುಮನಾಭನಲಿ ತೀರ ಭಕುತಿಯಿಲ್ಲ"**

ಇಲ್ಲಿನ ಶಬ್ದ ಸಂಯೋಜನೆಯೇ ಪ್ರಕಾಶಮಾನವಾಗಿದೆ. ಕೀರ್ತನೆಯು ಮುಂದುವರೆದು ಯಾಂತ್ರಿಕವಾದ ಪೂಜಾ ವಿಧಾನವನ್ನು ಇಲ್ಲಿ ಮುಚ್ಚು ಮರೆಯಿಲ್ಲದೆ ಖಂಡಿಸಿದೆ.

ಇಲ್ಲಿನ ಸ್ನಾನದ ಸೋಗು ದೇವರ ಪ್ರತಿಮೆಗಳ ಪ್ರದರ್ಶವನ್ನು ಹರಿತವಾದ ಮಾತುಗಳಲ್ಲಿ ತೆಗಳಿದ್ದಾರೆ. ಇನ್ನು 'ಮಡಿ' ಹೆಸರಿನಲ್ಲಿ ನಡೆಯುವ ಆಡಂಬರವನ್ನು ಕಟುವಾಗಿ ಟೀಕಿಸಿದ್ದಾರೆ.

**"ನಗೆಯು ಬರುತಿದೆ ಎನಗೆ ನಗೆಯು ಬರುತಿದೆ**

**ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು"**

ಎಂದು ಚಿಕಿತ್ಸಕ ದೃಷ್ಟಿಯಿಂದ ನೋಡುವುದಲ್ಲದೇ; ಜೀವನ ಎಂಬ ತೆರೆ ಮರೆಯಲ್ಲಿ ಎಂಥೆಂಥ ಅನಾಚಾರಗಳು ನಡೆಯುತ್ತಿವೆ ಎನ್ನುವುದನ್ನು ಬಿಚ್ಚಿ ಹೇಳುವರು ಅವರು. ಸದಾಚಾರದತ್ತ ನಮ್ಮ ಮನಸ್ಸನ್ನು ಸೆಳೆಯುವುದರಲ್ಲಿ ದುರಾಚಾರದ ಸ್ವರೂಪವನ್ನು ವಿವರಿಸುವುದರ ಮೂಲಕ ಪ್ರತ್ಯಕ್ಷ, ಅನುಪಲ್ಲವಿಗಳು ಲೋಕದ ನಡತೆಯನ್ನು ಕಂಡು ವಿಸ್ಮಯಗೊಳ್ಳುವ ಅಮೋಘವಾದ ವಾತಾವರಣವನ್ನು ನಿರ್ಮಿಸಿ ಬಿಡುತ್ತವೆ. ಇನ್ನು ಮುಂದುವರೆದ ಕೃತಿಯು ಗಂಡ ಪರಸತಿಗೆ, ಹೆಂಡತಿ ಪರಪುರುಷನಿಗೆ ಒಲಿಯುವುದನ್ನು ಹೇಳುತ್ತಾ ಅರ್ಥ ಮತ್ತು ಭಾವ ಸಮೃದ್ಧಿಯ ಸೊರಗುವುದನ್ನು ಕಾಣುತ್ತೇವೆ. ಅದರೂ ಇಲ್ಲಿ ಕಂಡುಬರುವ ಕಟಕಿ, ವಿಡಂಬನೆ, ಕುಹಕಗಳನ್ನು ಮೆಚ್ಚಿಕೊಳ್ಳುವಂತದ್ದಾಗಿದೆ. ಸಮಾಜದ ಏಣಿ ಶ್ರೇಣಿಯನ್ನು ಕುರಿತು ಹೇಳುವಾಗ ಹೊಲೆತನವನ್ನು–

**"ಹೊಲೆಯ ಹೊರಗಿಹನೆ ಊರೊಳಗಿಲ್ಲವೆ**

**ಹರಿಯ ಭಕ್ತರು ಪೇಳಿ ಮುತ್ತಿದನು"**

ಎಂದು, ನಡೆನುಡಿಯಿಂದ ಹೊಲೆತನ ಬರುವುದೇ ವಿನಾ ಹುಟ್ಟಿನಿಂದಲ್ಲ ಎಂದು ಪ್ರತಿಪಾದಿಸಿದ್ದಾರೆ. ಇಲ್ಲಿ ಅವರು ಕನಕದಾಸರಂತೆ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತಿಲ್ಲ, ಪ್ರಶ್ನಿಸಿಲ್ಲ ; ಆದರೆ ಯಾರು ಹೊಲೆಯ ಎಂಬ ಕಡೆ ಅವರ ಗಮನವಿದೆಯೇ ಹೊರತು ಹೊಲೆಯನನ್ನೇ ಪ್ರಶ್ನಿಸಿಲ್ಲ. ಅಂದರೆ ಸಮಾಜದ ಹೊಲಸನ್ನು ತೊಡೆಯಬೇಕೆಂಬ ನೈತಿಕ ದೃಷ್ಟಿ ಮಾತ್ರ ಅವರದ್ದಾಗಿದೆ. ಪುರಂದರದಾಸರು ಹಣದ ಮಹಿಮೆಯನ್ನು ವ್ಯಾಖ್ಯಾನಿಸುತ್ತಾರೆ. ಇಂದು ಸಹ ಹಣದ ಜೀವನದ ನೈತಿಕತೆಯನ್ನೇ ಗಾಳಿಗೆ ತೂರುವ ಗುಣವನ್ನು ಪಡೆದಿರುವುದನ್ನು ನಾವು ಅರಿತಿದ್ದೇವೆ. ಆ ವಿಚಾರಗಳು ರೂಪುಗೊಂಡ ಹೃದಯ ಸ್ಪರ್ಶಿಯಾಗುವ ಕೀರ್ತನೆಯಲ್ಲಿಯ ನುಡಿಗಟ್ಟುಗಳು ಇಂತಿವೆ.

**"ರೊಕ್ಕ ಎರಡಕ್ಕೂ ದುಖಃ ಕಾಣಕ್ಕ"**

**"ದುಗ್ಗಾಣಿ ಎಂಬುದು ದುರ್ಜನರ ಸಂಗ"**

**"ದುಗ್ಗಾಣಿ ಬಲು ಕೆಟ್ಟದಣ್ಣ"**

ಹೀಗೆ ಕೀರ್ತನೆಗಳ ಶಬ್ದದಲ್ಲಿರುವ ವೈಚಿತ್ರ್ಯ, ಕಲ್ಪಕತೆ, ಲೋಕಾನುಭವ, ಭಾಷೆಗಳಿಂದಲೂ ಕೀರ್ತನ ಸಾಹಿತ್ಯ ಸಂಪದವು ಲೋಕಜ್ಞಾನವನ್ನು ನೀಡುವ ತವನಿಧಿಯಾಗಿ ಪರಿಣಮಿಸುತ್ತದೆ.

ಪುರಂದರದಾಸರು ಇಡೀ ಮಾನವ ಸಮುದಾಯಕ್ಕೆ ಅನ್ವಯಿಸುವಂತೆ ರಚಿಸಿದ ಕೀರ್ತನೆಗಳನ್ನು ನೋಡಿದರೆ ಅವರಿಗೆ ಮಾನವ ಜನ್ಮದಲ್ಲಿರುವ ಶ್ರದ್ಧೆಯೂ ಅದರ ಸಾರ್ಥಕದ ಅರಿವು ಸ್ಪಷ್ಟವಾಗುತ್ತದೆ.

**"ಮನುಜ ಶರೀರವಿದೇನು ಸುಖ"** ಎಂದು ನಿಸ್ಸಾರತೆಯನ್ನು ಹೇಳಿದರೂ,

**"ಮಾನವ ಜನ್ಮ ದೊಡ್ಡದು ಇದ**

**ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ"**

ಎಂಬ ಪಲ್ಲವಿಯಲ್ಲಿ ಪ್ರಕಟವಾಗುವ ದಾಸರ ಆತ್ಮೀಯತೆ ಮನಸೆಳೆಯುತ್ತದೆ. ಹೀಗೆಯೇ ಮುಂದುವರೆದು ಕೀರ್ತನೆಯ ಸಾಲುಗಳಲ್ಲಿ ವೈರಾಗ್ಯದ ಕಡೆಗೆ ಮುಖ ಮಾಡುವುದು, ಕಾಣುವುದು, ಅದರ ಅರ್ಥ ದೃಷ್ಟಿಯಿಂದಲೂ ಸಂಕುಚಿತಗೊಳ್ಳುತ್ತದೆ. ಆದರೂ ಅದು ಪಾರಮಾರ್ಥಿಕವನ್ನು ಧ್ವನಿಸುತ್ತದೆ. ಪುರಂದರದಾಸ ಲೋಕಾನುಭವ ಅಪಾರವಾದದ್ದು. **"ಈಸಬೇಕು ಇದ್ದು ಜೈಸಬೇಕು"** ಎಂದು ಲೋಕಕ್ಕೆ ಬೋಧಿಸುವರು.

**"ಆಚಾರವಿಲ್ಲದ ನಾಲಿಗೆ" "ಜಾಲಿಯ ಮರದಂತೆ ದುರ್ಜನರು" "ನಿಂದಕರಿರಬೇಕು"** ಎನ್ನುವಾಗ ಅಪಾರವಾದ ಲೋಕಾನುಭವದ ಸವಿಯು ನಮ್ಮದಾಗುತ್ತದೆ. **"ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ"** ಎನ್ನುವಲ್ಲಿ ಅಂದಿನ ಪ್ರತಿಯೊಬ್ಬನು ದುಡಿಯುವುದು 'ಬಟ್ಟೆ-ಹೊಟ್ಟೆ'ಗಾಗಿಯೇ ಎಂದು ಮೇಲು-ಕೀಳು ಎಂಬುದನ್ನು ದುಡಿಮೆಯಲ್ಲಿ ಹೋಗಲಾಡಿಸಿದ್ದಾನೆ. ಧರ್ಮವನ್ನು ಕುರಿತು ಪುರಂದರದಾಸರು ಮಾಡಿರುವ ವ್ಯಾಖ್ಯಾನ ಸಾರ್ವತ್ರಿಕವಾದದ್ದು.

**"ಧರ್ಮವೇ ಜಯವೆಂಬ ದಿವ್ಯಮಂತ್ರ**

**ಮರ್ಮವನರಿತು ಮಾಡಲಿ ಬೇಕುತಂತ್ರ"**

ಎಂದು ಪಠಿಸುತ್ತಾ, **'ಬಂದದ್ದೆಲ್ಲ ಬರಲಿ, ಗೋವಿಂದನ ದಯೆವೊಂದಿರಲಿ'** ಈ ಕೀರ್ತನೆಯು ಧರ್ಮವನ್ನು ವಿಶದಿಪಡಿಸುತ್ತದೆ. ಜೊತೆಗೆ ಮನುಷ್ಯ ತನ್ನನ್ನು ತಾನು ಹೆಜ್ಜೆ ಹೆಜ್ಜೆಗೂ ಪರೀಕ್ಷಿಸಿಕೊಳ್ಳಬೇಕು. ಅಂದಾಗಲೇ ಮನುಷ್ಯನ ಜೀವನ ಉದ್ದಾರವೆನ್ನುತ್ತಾರೆ. ಹೀಗೆ ಪುರಂದರದಾಸರು ಸಮಾಜವನ್ನು ಚಿಕಿತ್ಸಕ, ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿದರು. "ಅವರ ಇಂತಹ ಸಿದ್ದಿಗೆ ಕಾರಣ, ಪುರಂದರದಾಸರು ಜನಸಾಮಾನ್ಯರ ಭಾಷೆಯನ್ನು ಬಳಸಿದರು; ಗಾಯನ, ನರ್ತನಗಳ ಮೋಹಕ ಮಾಧ್ಯಮಗಳಾಗಿ ರೂಢಿಸಿದರು. ಉಪನಿಷತ್ತಿನ ಗಹನ ತತ್ವಗಳನ್ನು ಕನ್ನಡಿಸಿದ್ದು ಮಾತ್ರವಲ್ಲ ಆ ತತ್ವಗಳನ್ನು ಸ್ವಿಕರಿಸಬಲ್ಲ ಒಂದು ಸಾಮಾಜಿಕ ಸ್ಥಿತಿಯನ್ನು ಸಿದ್ಧಿ ಮಾಡುವುದಕ್ಕಾಗಿ ಜನತೆಯ ಮೌಢ್ಯ, ಕುಂದು ಕೊರತೆ, ಲೋಪ-ದೋಷಗಳನ್ನು ಕಟೋಕ್ತಿಯಿಂದ ಖಂಡಿಸಿ ತಿಳಿಹೇಳಿ ಅಸಮಾನ್ಯ ನೈತಿಕ ಧೈರ್ಯವನ್ನು ಸಾಮಾಜಿಕ ಪ್ರಜ್ಞೆಯನ್ನು ವ್ಯಕ್ತಪಡಿಸಿದರು". ಎಂದು ಎಚ್.ಎಸ್. ವೆಂಕಟೇಶಮೂರ್ತಿಯವರು ಹೇಳಿರುವುದು ಪುರಂದರದಾಸರ ವ್ಯಕ್ತಿತ್ವದ ವಿಶಾಲತೆಯನ್ನು ತಿಳಿಸುತ್ತದೆ.

-----

ಅಧ್ಯಾಯ – ೫

# ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ, ಸಾಮಾಜಿಕ ಮೌಲ್ಯಗಳು

ಕರ್ನಾಟಕದಲ್ಲಿ ೧೫–೧೬ ನೆಯ ಶತಮಾನಗಳಲ್ಲಿ ಜನಪ್ರಿಯವಾದ ಭಕ್ತಿಪಂಥದ ಮುಖ್ಯ ಹರಿದಾಸರಲ್ಲಿ ಒಬ್ಬರು. ದಾಸ ಪರಂಪರೆಯಲ್ಲಿ ಬರುವ ೨೫೦ ಕ್ಕೂ ಹೆಚ್ಚು ದಾಸರಲ್ಲಿ ಕನಕರೊಬ್ಬರೇ ಶೂದ್ರದಾಸರು. ಹಾಗೆಯೇ ಕನ್ನಡ ಭಾಷೆಯ ಪ್ರಸಿದ್ಧ ಕೀರ್ತನಕಾರರು ಮತ್ತು ಪುರಂದರದಾಸರೊಂದಿಗೆ ಕರ್ನಾಟಕ ಸಂಗೀತದ ಮೂಲಭೂತ ಸಿದ್ಧಾಂತಗಳಿಗೆ ಕಾಣಿಕೆಯನ್ನಿತ್ತವರು. ಕನಕದಾಸರು ಮತ್ತು ಪುರಂದರದಾಸರನ್ನು ಕರ್ನಾಟಕ ಕೀರ್ತನ ಸಾಹಿತ್ಯದ ಅಶ್ವಿನಿ ದೇವತೆಗಳೆಂದು ಬಣ್ಣಿಸಲಾಗಿದೆ. ಕನಕದಾಸರು ದಂಡನಾಯಕರಾಗಿದ್ದು ಯುದ್ಧವೊಂದರಲ್ಲಿ ಸೋತ ಅವರಿಗೆ ವೈರಾಗ್ಯ ಉಂಟಾಗಿ ಹರಿಭಕ್ತರಾದರು.

## ಕನಕದಾಸರು(೧೪೮೮–೧೫೭೮):

ದಾಸ ಸಾಹಿತ್ಯದ ಅಶ್ವಿನಿ ದೇವತೆಗಳಲ್ಲಿ ಒಬ್ಬರೆಂದು ಪರಿಗಣಿತವಾಗಿರುವ ಕನಕದಾಸರು ಕನ್ನಡದ ಶ್ರೇಷ್ಠ ಸಂತಕವಿ. ಅನುಭಾವಿ, ಕೀರ್ತನಕಾರರೂ ಮತ್ತು ಕವಿಗಳೂ ಆಗಿದ್ದಾರೆ. ಇವರು ಧಾರವಾಡ ಜಿಲ್ಲೆಯ ಬಾಡ ಎಂಬ ಗ್ರಾಮದಲ್ಲಿ ಬೀರಪ್ಪ ಬಚ್ಚಮ್ಮ ಎಂಬ ಕುರುಬ ಜನಾಂಗದ ದಂಪತಿಗಳ ಉದರದಲ್ಲಿ ಜನ್ಮತಾಳಿದರು. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಅಧಿಕಾರಿಯಾಗಿದ್ದರಂತೆ. ಇವರ ಪೂರ್ವದ ಹೆಸರು ತಿಮ್ಮಪ್ಪ ನಾಯಕ. ಬಾಡ ಗ್ರಾಮದಲ್ಲಿದ್ದ ಆದಿಕೇಶವಮೂರ್ತಿಯನ್ನು ತಂದು ಕಾಗಿನೆಲೆಯಲ್ಲಿ ಪ್ರತಿಷ್ಠಾನ ಮಾಡಿ ದೇವಾಲಯವನ್ನು ಕಟ್ಟಿಸಿದರಂತೆ. ಯಾವುದೋ ಒಂದು ಸಂದರ್ಭದಲ್ಲಿ ಜೀವನದಲ್ಲಿ ನಿರಸನ ಉಂಟಾಗಿ ವ್ಯಾಸರಾಯರಿಂದ ದೀಕ್ಷೆ ಪಡೆದು ಕನಕದಾಸರಾದರು. ಇವರು ಪುರಂದರದಾಸರ ಸಮಕಾಲೀನರಾಗಿ ಅವರಿಗೆ ಸಮತೂಕದವರೂ ಸ್ವತಂತ್ರ ಕ್ರಾಂತಿಯುಳ್ಳವರೂ, ಸಮಾಜ ಸುಧಾರಕರೂ, ಕ್ರಾಂತಿಕಾರಿ, ವೈಚಾರಿಕ ಮನೋಧರ್ಮದವರಾಗಿಯೂ ಅದೇ ಕಾಲದಲ್ಲಿ

ಜೀವಿಸಿದರು. ಇವರು ಕೀರ್ತನೆಗಳನ್ನಲ್ಲದೆ **'ಮೋಹನ ತರಂಗಿಣಿ' 'ಹರಿಭಕ್ತಿಸಾರ' 'ನಳಚರಿತೆ' 'ರಾಮಧಾನ್ಯ ಚರಿತ್ರೆ'** ಮುಂತಾದ ಕಾವ್ಯಗಳನ್ನು ಬರೆದರಲ್ಲದೆ, ಅಲ್ಲಮನ ಬೆಡಗಿನ ವಚನಗಳಂತೆ ಮುಡಿಗೆಗಳನ್ನು ಬರೆದು ದಾಸ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. **'ಬಾಡಾದಾದಿ ಕೇಶವ' 'ಕಾಗಿನೆಲೆ ಆದಿಕೇಶವ'** ಎಂಬುವು ಇವರ ಅಂಕಿತಗಳಾಗಿವೆ. ಕನಕದಾಸರು ಕೀರ್ತನೆ ಮತ್ತು ಕಾವ್ಯಗಳಲ್ಲಿ ಬಂಡಾಯದ ದನಿ, ಸಾಮಾಜಿಕ ಕಳಕಳಿ, ವಿಡಂಬನಾ ಚಾತುರ್ಯ ಇರುವುದು ಕಂಡುಬರುತ್ತದೆ.

"ದಾಸ ಪಂಥದ ಪದ್ಮವ್ಯೂಹವನ್ನು ಪ್ರವೇಶಿಸಿದ ಕನಕದಾಸರು ತಮ್ಮ ಭಕ್ತಿಯಿಂದ ದಾಸರ ಅನುಗ್ರಹಕ್ಕೆ ಪಾತ್ರನಾಮದೊಂದು ಪವಾಡವೇ ಸರಿ" ಎಂದು ಕೆ.ಜಿ. ನಾಗರಾಜುರವರು 'ಮರುಚಿಂತನೆ' ಗ್ರಂಥದಲ್ಲಿ ಕನಕದಾಸರ ಸಾಧನೆ, ಸಿದ್ಧಿಯನ್ನು ತಿಳಿಸಲಾಗಿದೆ. "ದಾಸ ಸಾಹಿತ್ಯದ ಸುವರ್ಣಯುಗದ ಪ್ರವರ್ತಕರಲ್ಲೊಬ್ಬರಾಗಿ, ಯಾವ ಮತವನ್ನು ಬಿಡದೆ, ಯಾವ ಮತಕ್ಕೂ ಅಂಟಿಕೊಳ್ಳದೆ, ಸಕಲ ತತ್ವಗಳನ್ನು ಮೀರಿ, ನಿರ್ದಿಗಂತವಾಗಿ ಬೆಳೆದು, ವಿಶ್ವಮಾನವರಾಗಿ ವಿಜೃಂಭಿಸಿದ ಯೋಗ ಪುರುಷರವರು" ಎಂದು ದೇ.ಜ.ಗೌ. ರವರು 'ಜನಪ್ರಿಯ ಕನಕಸಂಪುಟ'ದ ಮುನ್ನುಡಿಯಲ್ಲಿ ಅವರವರ ಸ್ವತಂತ್ರ ಮನೋಭಾವವನ್ನು ಶ್ರೇಷ್ಠತೆಯನ್ನು ತಿಳಿಸಿದ್ದಾರೆ.

## ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ ಮೌಲ್ಯಗಳು:

ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಾಂಶ ಪ್ರಧಾನವಾಗಿರುವುದನ್ನು ಹಲವು ವಿಮರ್ಶಕರು ಗುರುತಿಸಿದ್ದಾರೆ. ಅವರು ಬಳಿಸಿರುವ ಪದ ಪ್ರಯೋಗ, ಅಲಂಕಾರಗಳು, ಛಂದಸ್ಸು, ಚಮತ್ಕಾರ, ವರ್ಣನೆಗಳಲ್ಲಿ ಕಾವ್ಯ ಪ್ರಜ್ಞೆಯೇ ಎದ್ದು ಕಾಣುತ್ತದೆ. ಗ್ರಾಮ್ಯ ಭಾಷೆಯ ಹಿಡಿತ, ಭಾವಗೀತಾತ್ಮಕತೆ, ಜಾನಪದಸತ್ವವನ್ನುಳ್ಳ ಅಂಶಗಳನ್ನು ಗುರುತಿಸಬಹುದು.

"ಪುರಂದರದಾಸರ ಕೀರ್ತನೆಗಳ ಸಂಖ್ಯೆಗೆ ಹೋಲಿಸಿದರೆ ಕನಕದಾಸರ ಕೀರ್ತನೆಗಳು ಅತ್ಯಲ್ಪವಾಗಿ ಕಾಣುತ್ತವೆ; ಆದರೆ ಕನಕದಾಸರ ಕೀರ್ತನೆಗಳನ್ನು ಗಮನಿಸಿದರೆ ಅವು ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು. ಹಾಗೆ ನೋಡಿದಾಗ ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೇ ಇರುವಂತೆ ತೋರುತ್ತದೆ. ಕನಕದಾಸರ ವ್ಯಕ್ತಿತ್ವ ದಾಸ ಪರಂಪರೆಯ ಭಕ್ತಿ ಪ್ರಜ್ಞೆಗೆ ಒಳಗಾದರೂ ಅವರ ಭಕ್ತಿಭಾವ ಕಾವ್ಯ ಪ್ರಜ್ಞೆಗೆ ಭಿತ್ತಿಯಾಗಿ ಪರಿಣಮಿಸಿತು. ಎಂದು ಜಿ.ಎಸ್. ಶಿವರುದ್ರಪ್ಪನವರು 'ಪರಿಶೀಲನೆ' ಎಂಬ ವಿಮರ್ಶಾ ಗ್ರಂಥದಲ್ಲಿ ಕನಕ – ಪುರಂದರ ಕಾವ್ಯ

ಶಕ್ತಿಯನ್ನು ತೌಲನಿಕವಾಗಿ ವಿವೇಚಿಸಿರುವುದು ಗಮನಾರ್ಹವಾಗಿದೆ. ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯದ ಉತ್ತಮ ಲಕ್ಷಣಗಳು ಶೈಲಿಯ ವೈಲಕ್ಷಣಗಳು ಮೈಗೂಡಿವೆ. ಅವರ ಕೀರ್ತನೆಗಳನ್ನು ವಿಶ್ಲೇಷಿಸಿದಾಗ ಸಾಹಿತ್ಯ ಸೊಬಗು – ಸೊಗಡು ಎದ್ದು ಕಾಣುವುದನ್ನು ನೋಡಬಹುದಾಗಿದೆ.

ದ್ವೈತಭಾವದ ಹರಿನಾಮ ಸ್ಮರಣೆಯಿಂದ ಪ್ರಾರಂಭವಾದ ಕನಕದಾಸರ ಸಾಧನೆ ಭಕ್ತಿ, ಆರ್ತತೆ ಆತ್ಮಶೋಧನೆ, ಛಲ ಆತ್ಮೀಯತೆ, ಅತ್ಮಸಮರ್ಪಣೆ, ನೀತಿಬೋಧನೆಗಳ ಮೂಲಕ ಅದ್ವೈತ ಸಿದ್ದಿಯ ಪರಮಾವಧಿ ನೆಲೆಯನ್ನು ಮುಟ್ಟುತ್ತದೆ. ಶ್ರೀ ಹರಿಯನು ಸಾಕ್ಷಾತ್ಕಾರಿಸಿಕೊಳ್ಳುವ ಅವನನ್ನು ಎಲ್ಲೆಡೆಯಲ್ಲೂ ಕಾಣುವ ಅವನ ಸಂಗಸುಖವನ್ನು ಅನುಭವಿಸುವ ಕಾತರತೆ ಉದ್ವಿಗ್ನತೆ ಮತ್ತು ತುಡಿತಗಳು ಕ್ಷಣ ಕ್ಷಣಕ್ಕೂ ಕಾವೇರುತ್ತದೆ.

**"ತಲ್ಲಣಿಸದಿರು ಕಂಡ್ಯ ತಾಳುಮನವೆ**

**ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ"**

ಎಂದು ಆತಂಕ, ತಳಮಳಗೊಳ್ಳುವುದನ್ನು ಮನಗಾಣುತ್ತೇವೆ. ಬೆಟ್ಟ, ಕಾಡು–ನದಿಗಳಂತಹ ಏಕಾಂತ ಸ್ಥಿತಿಯ ಪ್ರಾಕೃತಿಕ ವಸ್ತುಗಳ ಪ್ರಸ್ತಾಪವಿದೆ. **ಇಲ್ಲಿ ವೃಕ್ಷಕ್ಕೆ ನೀರೆರೆದವರು; ಪಕ್ಷಿಗಳಿಗೆ ಆಹಾರ ತಂದಿತ್ತವರು ಯಾರು**? ಎಂಬ ಬೆರಗು, ವಿಸ್ಮಯ ಮೂಲದ ಪ್ರಶ್ನೆಯ ಮೂಲಕ ದಾಸರಿಗೆ ಉತ್ತರವೂ ಸಿಕ್ಕುತ್ತದೆ. 'ಹುಟ್ಟಿಸಿದ ದೇವ ತಾ ಹೊಣೆಗಾರ' ಇಲ್ಲಿನ ದೃಷ್ಟಾಂತಗಳ ಸೊಬಗೇ ಅಪೂರ್ವವಾಗಿದೆ. ಭಾವದ ಇಂಗಿತ ಭಾಷೆಯಲ್ಲಿ ಸಾಕಾರಗೊಂಡ ಬಗೆಯಲ್ಲಿ ಕನಕದಾಸರ ಕಲ್ಪಕ ಶಕ್ತಿ ಅಗಾಧ ಕುಸರಿ ಕೆಲಸ ಮಾಡಿದೆ ಹಾಗೂ ದಿವ್ಯ ಸೌಂದರ್ಯವನ್ನು ದರ್ಶಿಸಿದೆ.

**'ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ'**

**'ದಾನ ಧರ್ಮವ ಮಾಡಿ ಸುಖಿಯಾಗು ಮನವೆ'**

**'ತನು ನಿನ್ನದು ಜೀವ ನಿನ್ನದು'**

ಎಂಬ ಕೀರ್ತನೆಗಳ ಸಾಲುಗಳಲ್ಲಿ ಮನಸ್ಸಿನ ಹೊಯ್ದಾಟಗಳನ್ನು ಸೂಚಿಸುತ್ತವೆ. ಆತ್ಮ ಶೋಧನೆ ಪ್ರತಿಯೊಬ್ಬ ಸಾಧಕನು ಕೈಗೊಳ್ಳಬೇಕಾದ ಸಾಧನ. ತಪ್ಪುಗಳನ್ನು ಮುಚ್ಚಿಟ್ಟುಕೊಳ್ಳದಿರುವುದೇ ಅವನ ಆತ್ಮ ಶೋಧನೆಗೆ ನಿದರ್ಶನ ರಾಷ್ಟ್ರಪಿತ, ಮಹಾನ್ ವ್ಯಕ್ತಿತ್ವ ಹೊಂದಿದ ಗಾಂಧೀಜಿಯವರು ಕೂಡ ಈ ಆತ್ಮ ಶೋಧನೆಯಿಂದ ಭಾರತದ ಉದ್ದಗಲ ತಮ್ಮ ವ್ಯಕ್ತಿತ್ವ ಛಾಯೆಯನ್ನು ಪ್ರಸರಿಸಿದ್ದು ಎನ್ನುವುದು ಸತ್ಯ.

**'ಎಳ್ಳು ಕಾಳಿನಷ್ಟು ಭಕುತಿ ಎನ್ನೊಳಗಿಲ್ಲ'**

**'ಗಂಧ ಕಸ್ತೂರಿ ಲೇಪನದ ಪರಿಮಳ'**

**ಮಾಯಾ ಪಾಶದೊಳಗೆ ಸಿಲುಕಿಸುವಂತ ಪಂಚೇಂದ್ರಿಯಗಳು'**

ಮುಂತಾದ ಸರ್ವಾರ್ಪಣ ದೃಷ್ಟಿಯ ಈ ಕೀರ್ತನೆಗಳಲ್ಲಿ ಭಾವನಿರ್ಭರತೆಯೇ ಮುಖ್ಯಾಂಶ. ಶಬ್ದ ವೈಚಿತ್ರ್ಯ ರೂಪಕಗಳ ಸಾದೃಶ್ಯಗಳು ಉತ್ಸಾಹಶೀಲವಾಗಿವೆ.

**'ಬೆಳ್ಳಕ್ಕಿಯ ಡಂಭತನ'**

**'ಗುಂಡು ಮೂಳುಕನ ಹಕ್ಕಿಯ ಸ್ನಾನ'**

**'ಮಂಡೂಕನ ಧ್ಯಾನ'**

**'ಗಾಣದೆತ್ತಿನ ಪ್ರದಕ್ಷಿಣೆ'**

**'ಕಳ್ಳರಿಗೆ ಕಳ್ಳನಂತೆ'** –ಇಲ್ಲಿ ಉಪಮೆಗೆ ಸಮನಾದ ಧರ್ಮ ಒದಗಿಸಿದಂತಿದೆ.

ಭಗವಂತನಿಗಾಗಿ ಅನುದಿನ ಅಂಗಲಾಚಿದರೂ ಅವನು ದರ್ಶನೀಯದಿದ್ದಾಗ ಭಕ್ತನಲ್ಲಿ ಸಹಜವಾಗಿಯೇ ಛಲ ತಲೆಯೆತ್ತುತ್ತದೆ ಅವನ ಮೊರೆ ಪ್ರತಿಭಟನೆಯ ರೂಪ ತಾಳುತ್ತದೆ.

**'ಆ ವನಸಿರಿಯಲ್ಲಿ ಎನ್ನ ಮರೆತೆ, ದೇವ ಜಾನಕಿರಮಣ ಪೇಳು'**

**'ನಿನ್ನಿಂದ ನಾನೇ ಜನಿಸಿ ಬಂದೆನೆ ದೇವ'**

**'ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ'**

**'ಆರು ಬದುಕಿದರಯ್ಯ ಹರಿನಿನ್ನ ನಂಬಿ'**

**'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ'**

ಇವುಗಳಲ್ಲಿ ಭಕ್ತಿಯ ಆರ್ತತೆ, ಸಾತ್ವಿಕ ಕ್ರೋಧ, ಭಾವಾತಿಶಯತೆ, ಸ್ವಭಾವಿಕ ಮನೋಧರ್ಮವಿದೆ.

**"ನೀ ಮಾಯೆಯೊಗೋ ನಿನ್ನೊಳು ಮಾಯೆಯೋ"** ಎಂದು ಮೂರ್ತ ಅಮೂರ್ತ ವಿಚಾರಗಳನ್ನು ಮುಖಾಮುಖಿ ಮಾಡಿ ಹೆಜ್ಜೆ ಹೆಜ್ಜೆಗೂ ವಿಸ್ತರಿಸುತ್ತಾ ಹೋಗುವ ಆಶಯ ಮೂಲವಾದ ಜಿಜ್ಞಾಸೆ, ತನ್ನ ವಿಚಾರದ ವಿಲಾಸದಿಂದ ತಾತ್ವಿಕ ಜಿಜ್ಞಾಸೆಯಲ್ಲಿ ಸೌಂದರ್ಯದ ಜಿಜ್ಞಾಸೆಯೂ ಆಗಿ, ಕಡೆಗೆ ಈ ಲೋಕದ ಮೂಲಭೂತ ವಿಸ್ಮಯ ಹೊಳಹಿನಲ್ಲಿ ನಿಲುಗಡೆಯನ್ನು ಕಂಡುಕೊಳ್ಳುವ ರೀತಿ ಅಪೂರ್ವವಾಗಿದೆ. ಈ ಮೇಲಿನ ಕೀರ್ತನೆಗಳಲ್ಲಿ ಭಾವಗೀತೆಯ ಸಾವಯವ ರಚನಾಗುಣ, ತಾರ್ಕಿಕವಾಗಿ ಪರಿಣಾಮಕಾರಿಯಾದ ಶಿಲ್ಪದಿಂದ ಕೂಡಿಸಿದೆ. ಇಲ್ಲಿಯ ನಾಟಕೀಯ ಶೈಲಿಯೂ ಇದರ ಸಹಜತೆಗೆ ಸಾಕ್ಷಿಯಾಗಿದೆ. ಸರ್ವಶಕ್ತನಾದ ಭಗವಂತನು ಎಲ್ಲ ಕಡೆ ಇರುವಾಗ ನನ್ನಲ್ಲಿಯೂ ಇದ್ದಾನೆ ಎಂಬ ಅರಿವುಂಟಾದ ಮೇಲೆ ಆತನನ್ನು ತಂದೆಯಾಗಿ, ಮಿತ್ರನಾಗಿ ಸಕಲವೂ ಆಗಿ ಕಾಣುತ್ತಾರೆ.

**'ಏಕೆ ಪವಡಿಸಿದೆ ನೀನಿಲ್ಲಿ ಜಗದೇಕ ವಿಖ್ಯಾತ'**

**'ಪಶ್ಚಿಮ ರಂಗನಾಥ'**

**'ಮುತ್ತು ಬಂದಿದೆ ಕೇರಿಗೆ, ಜನರೇ ಕೇಳಿ'**

ಈ ಕೀರ್ತನೆಯೊಳಗಣ ಕಲ್ಪಕತೆ ಮೆಚ್ಚುವಂತದ್ದು; ಪುರಾಣ ಪ್ರಪಂಚದ ಉತ್ತರ ಮಾಲಿಕೆಯನ್ನೇ ಅನುಸರಿಸಿದರೂ ಕೊನೆಯ ಸಾಲಿನಲ್ಲಿ ವಿಷಾದ ಪೂರ್ಣವಾದ ಮುಕ್ತಾಯ ಅಭೂತಪೂರ್ಣವಾಗಿದೆ. ಕನಕದಾಸರು ದಾಸರಲ್ಲಿ ಕವಿಗಳು ಎನ್ನುವ ಮಾತಿಗೆ ಜೀವಂತ ಸಾಕ್ಷಿಯಾಗಿದೆ.

ಕನಕದಾಸರು ತಮ್ಮ ಸುತ್ತ ಮುತ್ತಣ ಜೀವನದ ಬಗ್ಗೆ ಪ್ರಜ್ಞೆಯುಳ್ಳವರಾಗಿ ಜನಭಾಷೆಯ ಮೂಲಕ ಎಚ್ಚರಗೊಳಿಸಿದ್ದಾರೆ. ಅವರ ಕೀರ್ತನೆಗಳ ಶೈಲಿ ಬಹುಮಟ್ಟಿಗೆ ದೇಶೀಯತೆಯ ಲಕ್ಷಣಗಳನ್ನು ತುಂಬಿಕೊಂಡಿದೆ. ಅವರಲ್ಲಿ ಕೇವಲ ಸುಶಿಕ್ಷಿತ ಸಮಾಜದ ಭಾಷೆಮಾತ್ರವಲ್ಲ ಅವರು ಹುಟ್ಟಿ ಬೆಳೆದ ಅಶಿಕ್ಷಿತ ಸಮಾಜದ ಭಾಷೆಯೂ ಯಥಾವತ್ತಾಗಿ ಬಂದಿದೆ.

**'ಆತನೊಲಿದ ಮೇಲೆ ಯಾತರ ಕುಲವಯ್ಯ'**

**'ಡಿಂಬದೊಳು ಪ್ರಾಣವಿರಲು'**

ಇಂಥ ಅಭಿವ್ಯಕ್ತಿಗಳು ಇದಕ್ಕೆ ನಿದರ್ಶನಗಳು ಸರಳತೆ, ಹೃದ್ಯತೆಗಳೇ ಅವರ ಶೈಲಿಯ ವಿಶಿಷ್ಟತೆಯಿಂದ ಕೂಡಿದೆ. ಎಲ್ಲಿಯೂ ಭಾಷೆ, ಕಠಿಣತೆಯಿಂದ ಕೂಡಿಲ್ಲ. ಎತ್ತಿಕೊಂಡ

ವಸ್ತು ಭಾವಗಳಿಗೆ ಉಚಿತವಾಗಿ, ಸರಳವಾದ ಮಾತುಗಳಲ್ಲಿ ವಿಶೇಷದ ಅರ್ಥವನ್ನು ವಿಸ್ತರಿಸುತ್ತಾ ಹೋಗುತ್ತದೆ.

**'ಅಹುದಾದರೆ ಅಹುದೆನ್ನಿ ಅಲ್ಲವಾದರಲ್ಲವೆನ್ನಿ'**

**'ದೇವರಿಲ್ಲದ ಗುಡಿಯು ಪಾಳು ಬಿದ್ದಂಗಡಿಯು'**

**'ಕರ್ಮವಿಲ್ಲದ ಗಂಡು ಕರಿಯ ಒನಕೆಯತುಂಡು'**

ಈ ಮಾತುಗಳಲ್ಲಿರುವ ಲಾಲಿತ್ಯ ಮತ್ತು ಸರಳತೆ ಜನಸಾಮಾನ್ಯರಿಗೂ ತಿಳಿಯುವಂತದ್ದಾಗಿದೆ.

**'ಹಳ್ಳ ಹರಿದು ಹೋಗುವಾಗ ಗುಳ್ಳೆ ಬಂದು ಒಡಿಯುವಂತೆ ಉಳ್ಳಿ ಪೊರೆಯಂತೆ ನೋಡೊ ಸಂಸಾರದಾಟವು'** ಈ ವರ್ಣನೆಗಳಲ್ಲೆಲ್ಲ ಪ್ರತಿಮಾ ವೈಭವಗಳಿಂದ ಕನಕದಾಸರ ಶೈಲಿಯ ವಿಶಿಷ್ಟತೆ ನಿಜವಾದ ಕವಿಗಳು ಎನ್ನುವುದನ್ನು ತೋರಿಸುತ್ತದೆ.

ಒಂದು ಶತಮಾನದಲ್ಲಿ ಪ್ರಚಲಿತವಾದ ವಿವಿಧ ಛಂದೋ ರೂಪ ಸಲೀಸಾಗಿ ಬರೆಯುಬಲ್ಲರು. ಕೀರ್ತನೆಗಳ ದಾಟಿಯಲ್ಲಿ ಸಾಂಗತ್ಯದಲ್ಲಿ ಅವರ ಪ್ರಯೋಗ ಗಮನಾರ್ಹವಾಗಿದೆ. ಇಲ್ಲೆಲ್ಲ ಪ್ರಧಾನವಾಗಿ ದೇಶೀಯತೆ ಮೈದಾಳಿ ಎಲ್ಲರ ಮನಸ್ಸನ್ನು ಸೂರೆಗೊಳ್ಳುತ್ತದೆ.

ಅದರಿಂದಲೇ "ಕನಕದಾಸರು ಕವಿ ಸಂತರ ಸಂಗಮ"ರಾಗಿದ್ದಾರೆ. ನಮ್ಮ ಸಾಹಿತ್ಯದಲ್ಲಿ ಅವರು ನಮಗೆ ಕಾವ್ಯವನ್ನು, ಮೌಲ್ಯಗಳನ್ನು, ಸಂದೇಶಗಳನ್ನು ಉಳಿಸಿ ಹೋಗಿದ್ದಾರೆ. ಅವರ ಬೋಧನೆ ಕಾವ್ಯಮಯವಾಗಿದೆ. ಅವರ ಕಾವ್ಯದಲ್ಲಿ ಅದ್ಬುತವಾದ ಬೋಧನೆಯು ಇದೆ. ತಳಮಳಕ್ಕೊಳಗಾಗಿರುವ ಇಂದಿನ ಬದುಕಿನ ಕನಕದಾಸರ ಕೀರ್ತನೆಗಳಲ್ಲಿ ಒಂದು ನೆಮ್ಮದಿ. ಸಮಾಧಾನಗಳು ಬದುಕಿಗೆ ತೋರುತ್ತದೆ. ಅಸ್ತ-ವ್ಯಸ್ತವಾಗಿರುವ ನಮ್ಮ ಸಮಾಜ ಜೀವನಕ್ಕೆ ಅವುಗಳ ಒಂದು ಮಾರ್ಗ ಕಾಣಿಸುತ್ತದೆ ಎಂದು **ಡಾ|| ಹಾ. ಮಾ. ನಾಯಕರವರು ಹೇಳಿರುವದು ಔಚಿತ್ಯಪೂರ್ಣವಾಗಿದೆ.**

ಕನಕದಾಸರು ರಚಿಸಿದ ಕೀರ್ತನೆಗಳ ನಿರೂಪಣಾಧಾಟಿಯನ್ನು ಗಮನಿಸಿದಾಗ, ಅವು ನಾಲ್ಕು ಬಗೆಯ ಭಾವಾರ್ಥದ ವಿಧಾನವನ್ನು ಅನುಸರಿಸಿದುದು ಕಾಣುತ್ತದೆ : ೧. ಸ್ವಗತದ ಧಾಟಿಯಲ್ಲಿ, ತನ್ನ ಮನಸ್ಸು ಅಂತರಾತ್ಮವನ್ನು ಕುರಿತು ಹೇಳಿಕೊಂಡಂತಹ ಕೀರ್ತನೆಗಳು. ೨.ಆರಾಧ್ಯ ದೈವವಾದ 'ಕಾಗಿನೆಲೆಯಾದಿಕೇಶವ'ನನ್ನು ಉದ್ದೇಶಿಸಿ ಹೇಳಿರುವ ಮಾತುಗಳು.

೩.ತನ್ನ ಸುತ್ತಲಿನ ದಾಸರು, ಭಕ್ತರು, ಸಾಧಕರುಗಳನ್ನು ಸಂಬೋದಿಸಿ ಹೇಳಿದ ಸಾಂದರ್ಭಿಕ ಹೇಳಿಕೆಗಳು. ೪.ಘೋಷಣಾರೂಪದಲ್ಲಿ ಯಾರಿಗೂ-ಎಲ್ಲರಿಗೂ ಕೇಳುವಂತೆ ಹೇಳಿದ ಮಾತುಗಳು. ಅಂತರಂಗ-ಬಹಿರಂಗಗಳೆರಡಲ್ಲೂ ಹರಿಭಕ್ತನಾಗಿ ವ್ಯಕ್ತಿತ್ವ ರೂಪಿಸಿಕೊಂಡಿದ್ದ ಕನಕದಾಸರು ವಿವಿಧ ಸಮಯದಲ್ಲಿ ಅಂದು ಹೇಳಿದ ಕೀರ್ತನೆಗಳಲ್ಲಿ ಈ ವೈವಿಧ್ಯವಿರುವುದರಿಂದ ಅವುಗಳಲ್ಲಿ ಸಾಹಿತ್ಯದ ಉತ್ತಮ ಲಕ್ಷಣಗಳು, ಶೈಲಿಯ ವೈಲಕ್ಷಣಗಳು ಮೈಗೂಡಿವೆ. ಈ ನಿಟ್ಟಿನಿಂದ ಕನಕದಾಸರ ಕೀರ್ತನೆಗಳನ್ನು ವಿಶ್ಲೇಷಿಸಿದಾಗ ಸಾಹಿತ್ಯದ ಸೊಬಗು-ಸೊಗಡು ಎದ್ದು ಕಂಡೀತು.

**"ತಲ್ಲಣಿಸದಿರು ಕಂಡ್ಯ ತಾಳು ಮನವೆ"**

'ಸ್ವಗತ'ದ ಧಾಟಿಯಲ್ಲಿರುವ ಹಲವು ಕೀರ್ತನೆಗಳು ಕನಕದಾಸರು ಹರಿಭಕ್ತನಾಗಿ ರೂಪುಗೊಳ್ಳುತ್ತಿರುವ ಹಂತದಲ್ಲಿ ಅವರಿಂದ ರಚಿತವಾಗಿರಬಹುದಾಗಿದೆ. ಪ್ರವೃತ್ತಿ ಜನ್ಯವಾದ ಆಸೆಗಳು ಮಾಮೂಲೀ ಜೀವನದ ಸುಖ ಸಂತಸದ ಕಡೆಗೆ ಎಳೆಯುತ್ತಿದ್ದರೆ, ಉದಾತ್ತ ಆಲೋಚನೆಗಳು ಕನಕದಾಸನನ್ನು ಭಕ್ತಿ, ಅನುಭಾವದ ಕಡೆಗೆ ಎಳೆಯುತ್ತಿವೆ. ಈ ದ್ವಂದ್ವಗಳನ್ನು ಗೆಲ್ಲುವುದಕ್ಕೆ ಕೆಲವಾರು ದಿನಗಳ ಪ್ರಯತ್ನ ಸಾಲದು ; ಹಲವು ವರ್ಷಗಳ ಸಾಧನೆಯೇ ಬೇಕು. ಸಾಧಕನು ಭಗವದ್‌ಭಕ್ತಿಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ನಿರಂತರ ಯತ್ನದಲ್ಲಿರುವಾಗ ಮನಸ್ಸಿಗೆ ಉಂಟಾಗುವ ಆತಂಕ, ತಲ್ಲಣ, ಕಳವಳ-ಕಸಿವಿಸಿಗಳು ಅಸಹಾನೀಯ. ಸಾಧಕನನ್ನು ಇವು ಕ್ಷಣಿಕ ಹತಾಶೆಗೆ ಒಳಪಡಿಸಬಹುದು. ಆದರೆ ಅವನಲ್ಲಿ ಚಿಂತನಾ ಶಕ್ತಿ ಇದ್ದು, ಅಚಲವಾದ ಶ್ರದ್ಧಾಪೂರ್ಣ ನಿಲುವಿಗವನು ತಲುಪಿರುವುದರಿಂದ ಒದಗಿ ಬಂದ ಎಂತಹದ್ದೇ ಕಳವಳ ಭಕ್ತನನ್ನು ಪರಮಾತ್ಮನ ಅಮೂರ್ತವಾದ, ಆದರೆ ಅಗಾಧವಾದ ಶಕ್ತಿಯ ಕಡೆಗೆ ಒಯ್ಯುತ್ತದೆ. ಸಾಧಕನಲ್ಲಿ ಉಂಟಾಗುವ ಈ ಪ್ರಕ್ರಿಯೆಯನ್ನು ಕನಕದಾಸರು ಕವಿಯಾಗಿ ವ್ಯಕ್ತಪಡಿಸುವುದನ್ನು, ದಾಸನಾಗಿ ಇದಕ್ಕೆ ಪ್ರತಿಕ್ರಿಯಿಸುವುದನ್ನು

ಕಾಗಿನೆಲೆಯಾದಿಕೇಶವನನ್ನು ನೆರೆ ನಂಬಿದ್ದಾಯಿತು. ಆದರೆ ಅವನು ತನ್ನನ್ನು 'ಕಾಯು'ವನೆ, ಕೈಬಿಡುವನೆ, ಎಂಬ ತೊಳಲಾಟ ಒಳಗೆ, ಏಕಾಕಿತನಾದ ಕಾದಾಟವು ಕನಕದಾಸರನ್ನು ಹತಾಶಗೊಳಿಸಿದೆ. ತನ್ನ ಮನಸ್ಸಿನ ಈ ಸ್ಥಿತಿ ಕೇವಲ ಭ್ರಮೆ ; ನಿಜದಲ್ಲಿ ಕಾಗಿನೆಲೆಯಾದಿಕೇಶವನು ಸಹಜವಾಗಿ ಎಲ್ಲರನ್ನು ಕಾಯುತ್ತಿರುವನು ಎಂಬ ಸತ್ಯ ಅವನ ಬುದ್ಧಿಗೆ ಗೋಚರವಾಗಿದೆ, ಮನದ ಆತಂಕ, ಬುದ್ಧಿಯ ಪರಿಹಾರ ಇವೆರಡು ಪ್ರಸ್ತುತ ಕೀರ್ತನದಲ್ಲಿ ಹುಟ್ಟಿ ಬೆಳೆಯುವ ರೀತಿಯು ಅಭ್ಯಾಸನೀಯವಾಗಿದೆ.

## ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ಮೌಲ್ಯಗಳು:

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಜನರ ನಡುವಳಿಕೆ ಸಮಾಜದಲ್ಲಿ ಬೇರು ಬಿಟ್ಟ ರೂಢಿಗತವಾದ ಸಂಪ್ರದಾಯಗಳು, ಜಾತಿ-ಮತ ವ್ಯವಸ್ಥೆಗಳು, ಬಡವ-ಬಲ್ಲಿದ, ಮೇಲು-ಕೀಳೆಂಬ ತಾರತಮ್ಯ, ಹಳಸಲು ಮೌಲ್ಯಗಳು, ಬದುಕಿನ ಆಡಂಬರ ಮೊದಲಾದ ವಿಚಾರಗಳನ್ನು ವಿಡಂಬಿಸಿರುವ ರೀತಿ ಅನನ್ಯವಾದುದು. ಹೀಗೆ ಮಾಡುವಾಗ ಇವರು ವಾಸ್ತವತೆಯ ಕಠೋರ ಸತ್ಯವನ್ನು ಪರಿಣಾಮಕಾರಿಯಾಗಿ ಅನಾವರಣಗೊಳಿಸುವ ಪ್ರಾಮಾಣಿಕ ಪ್ರಯತ್ನ ಮಾಡುತ್ತಾರೆ. "ಕನಕದಾಸರ ಕೀರ್ತನೆಗಳ ಮೂಲಸೆಲೆ ಭಕ್ತಿಯಾದರೂ ದೈವ ಲೀಲಾವರ್ಣನೆ, ಆತ್ಮ ನಿವೇದನೆ, ಮತ್ತು ಸಾಮಾಜಿಕ ವಿಡಂಬನೆಯ ತ್ರಿವೇಣಿ ಸಂಗಮ ಅವರ ಕೀರ್ತನೆಗಳಲ್ಲಿ ಮಡುಗಟ್ಟಿದೆ" ಎಂದು ಪದ್ಮಾಶೇಖರರವರು ಹೇಳಿರುವುದು ಸುತ್ಯಾರ್ಹವಾಗಿದೆ.

ಕನಕದಾಸರ ಸಾಮಾಜಿಕ ಕಾಳಜಿಗಳನ್ನು ವಿಚಾರ ಮಾಡುವ ಸಂದರ್ಭದಲ್ಲಿ ಪೂರಕವಾಗಿ ಎರಡು ಅಂಶಗಳನ್ನು ಗಮನಿಸುವುದು ಅವಶ್ಯಕವೆನಿಸುತ್ತದೆ. ಒಂದು ಅವರ ಕಾಲ ಅಥವಾ ಪರಿಸರ. ಎರಡು ಅವರ ದಾಸತ್ವ ಹದಿನೈದನೆಯ ಶತಮಾನದ ಅಂಚಿನಲ್ಲಿ ಬಾಳಿದ ಸಂತನೊಬ್ಬನ ಸಾಮಾಜಿಕ ಪ್ರಜ್ಞೆಯನ್ನು ಇಪ್ಪತ್ತನೆಯ ಶತಮಾನದ ಹಂಚಿನಲ್ಲಿ ನಿಂತು ವಿಶ್ಲೇಷಿಸುವಾಗ, ಈ ಎರಡು ಅಂಶಗಳನ್ನು ನೆನಪಿಸಿಕೊಂಡೆ ಚರ್ಚೆ ಮಾಡಬೇಕೆಂಬುವುದು ಮಾತು. ಅಂದರೆ ಹದಿನೈದನೆಯ ಶತಮಾನಕ್ಕಿಂತ ಇಪ್ಪತ್ತನೆಯ ಶತಮಾನದ ನಮ್ಮ ನಡುವಿನ ಸಮಾಜ ಹೆಚ್ಚು ಸಂಕೀರ್ಣವೂ ಹೆಚ್ಚು ಸಿನಿಕವೂ ಆಗಿರುವುದರಿಂದ ನಾವು ನೋಡ ಬಯಸುವ ಸಾಮಾಜಿಕ ಸಂಗತಿಗಳನ್ನು ಅಷ್ಟೇ ಸೂಕ್ಷ್ಮವಾಗಿ, ಹೆಚ್ಚು ಹರಿತವಾಗಿ, ತೀವ್ರವಾಗಿ ಕಾಣಬಯಸುತ್ತೇವೇನೋ ಎಂಬ ಅನುಮಾನ ನನಗಿದೆ. ಏನೇ ಇರಲಿ, ಐದು ಶತಮಾನಗಳ ಹಿಂದೆ ಬಾಳಿ ಹೋದ ಸಂತ ಕವಿಯೊಬ್ಬರ ಸಾಮಾಜಿಕ ಚಿಂತನೆಯನ್ನು ಇಂದು ಪರಿಗಣಿಸುತ್ತಿದ್ದೇವೆ-ಎಂಬುವ ಮಾತೇ ಆ ಕವಿಯ, ಅವರ ಸಾಹಿತ್ಯದ ಹಿರಿಮೆಯನ್ನು ತಿಳಿಸುತ್ತದೆ. ಇದು ನಮ್ಮ ಸಾಮಾಜಿಕ ಪರಿಸರದ ಸಾಹಿತ್ಯವನ್ನು ಜೀವಂತವಾಗಿರಿಸಿಕೊಳ್ಳುವ ವಿಶ್ವಾಸವನ್ನು ತೋರಿಸುವ ಬಗೆಯು ಆಗಿರಬಹುದು.

ಕನ್ನಡ ಸಾಹಿತ್ಯ ಚರಿತೆಕಾರರು ಹೇಳುತ್ತಾರೆ : "ಕನಕದಾಸನ ಜೀವನವೇ ಒಂದು ಮಹಾ ಕೃತಿಯಾಗಿತ್ತು. ಅವನ ಕೃತಿಗಳಲ್ಲಿ ಮಹೋನ್ನತಿ ಬೆಳಗಿದೆ. ಪುರಂದರದಾಸರಂತೆ ಆದರೂ ಅವರಿಗಿಂತ ಕೆಲಮಟ್ಟಿಗೆ ಬೇರೆಯಾಗಿ ಕನಕದಾಸ ತನ್ನ ಜೀವನ ಸಾಹಿತ್ಯಗಳ ಸಿದ್ಧಿಯಿಂದ ಕನ್ನಡಿಗರ ಚಿರಂತನವಾದ ಸಂಸ್ಕೃತಿ ದೀಪಗಳಲ್ಲಿ ಒಂದಾಗಿದ್ದಾರೆ."

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು, ಜೀವನ ಮತ್ತು ಸಾಹಿತ್ಯಗಳ ಸಿದ್ಧಿಯಿಂದ ಕನಕದಾಸ ಚಿರಂತನವಾಗಿದ್ದಾನೆ ಎಂಬ ಮಾತು. ಬದುಕನ್ನು ಸ್ಪಂದಿಸುವ ಸಾಹಿತ್ಯ ರೂಪುಗೊಂಡರೆ ಅದೊಂದು ಸಾಂಸ್ಕೃತಿಕ ದಾಖಲೆಯಾಗುತ್ತದೆ ಎಂಬ ಮಾತು. ಅಂದರೆ ಒಬ್ಬ ಲೇಖಕನ ಅನುಭವ ಮತ್ತು ಅಭಿವ್ಯಕ್ತಿ ಎರಡು ಅರಳುಗಟ್ಟಿದರೆ ಅವರ ರಚನೆ ಹೇಗೆ ಸಾರ್ವತ್ರಿಕವೂ ಸಾರ್ವಕಾಲಿಕವೂ ಆಗಬಹುದು ಎನ್ನುವುದಕ್ಕೆ ಕನಕದಾಸರ ರಚನೆಗಳು ನಮ್ಮ ಮುಂದಿವೆ. ನನ್ನ ಪ್ರಕಾರ ಕನಕದಾಸರು ಕೇವಲ ಕೀರ್ತನಕಾರ ಆಗಿದ್ದಾರೆ ಅಥವಾ ಕೇವಲ ಭಕ್ತ ಮಾತ್ರ ಆಗಿದ್ದರೆ ಸಾಮಾಜಿಕವಾಗಿ ಈ ಮಾತನ್ನು ಹೇಳಲು ಬರುತ್ತಿರಲಿಲ್ಲ. ಅವರು ಕವಿಯೂ ಆಗಿದ್ದಾನೆ ಎಂಬುವುದರಲ್ಲೆ ಅವರ ಈ ಅನುಭವ ಮತ್ತು ಅಭಿವ್ಯಕ್ತಿ ನೆಲೆಗಳು ಗಟ್ಟಿಗೊಳ್ಳುತ್ತವೆ.

ಕನಕದಾಸರ ಸಾಹಿತ್ಯವನ್ನು ಗಮನಿಸಿ ಅವರ ಒಟ್ಟು ನಿಲುವನ್ನು ಪರಿಭಾವಿಸುವಾಗ ಮೂಲಗಾಮಿಯಾಗಿ ಸುತ್ತುವ ಭಕ್ತನ ಕರ್ಮ ಸಿದ್ಧಾಂತದಿಂದ ಕವಿಯು ಆಚೆ ಬರಲು ಆಗದಿರುವುದನ್ನು ಕಾಣುತ್ತೇವೆ. ಮಣ್ಣಿನಲ್ಲಿ ಬಂಧಿಸಿದ ದೇಹದ ಮಣ್ಣು ಕೂಡಿಸಬೇಡ ಎಂಬ ಕನಕದಾಸರ ಇಹದ ಅರಿವಿದ್ದೂ ಪರದ ಕಡೆ ಧಾಟಿ ಬಿಡುವಾಗ ಇದರ ಅನುಭವವಾಗುತ್ತದೆ. ಇಂಥ ತತ್ತ್ವವನ್ನು ಅವರು ಒಪ್ಪಿಯೂ ಸಾಮಾಜಿಕ ಬದುಕಿನ ಬಗ್ಗೆ ತೋರಿದ ಕಾಳಜಿ ಮಾತ್ರ ಅಪೂರ್ವವಾಗಿದೆ. ಇದು ಕನ್ನಡ ಭಕ್ತಿ ಪಂಥದ ಸಂದರ್ಭದಲ್ಲಿ ನಾವು ಕಾಣಬಹುದಾದ ವಿಶೇಷವಾದ ಮತ್ತು ವಿಭಿನ್ನವಾದ ಅಭಿವ್ಯಕ್ತಿ ಎನ್ನಬಹುದು.

ಈ ಮಾತನ್ನು ಇನ್ನಷ್ಟು ಸ್ಪಷ್ಟಗೊಳಿಸುವುದಕ್ಕಾಗಿ ಸ್ವಲ್ಪ ಹಿಂದೆ ಸರಿದು ವಚನಕಾರರ ಕಾಲವನ್ನು ಉಲ್ಲೇಖಿಸಬಹುದು.

ನಾವು ಸಾಮಾನ್ಯವಾಗಿ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಗಳೆರಡನ್ನೂ ಪರಸ್ಪರ ಹೋಲಿಸುತ್ತೇವೆ. ಈ ಎರಡರ ಮಧ್ಯೆ ಸಾಮ್ಯವನ್ನು ಕಾಣ ಬಯಸುತ್ತೇವೆ. ಇದೇ ಇಲ್ಲಿ ಪ್ರಶ್ನಾರ್ಹವಾಗುವುದು. ಸಾಮಾಜಿಕ ಮಹತ್ವದ ದೃಷ್ಟಿಯಿಂದ ನೋಡಿದಾಗ ಈ ಎರಡು ಪಂಥಗಳು ಪರಸ್ಪರ ಭಿನ್ನ. ಇವುಗಳ ದಾರ್ಮಿಕ ಆಂದೋಲನ–ಆದೋಲನದ ಪರಿಭಾಷೆಯಲ್ಲಿಯೇ ಹೇಳಬೇಕಾದರೆ–ವಚನ ಸಾಹಿತ್ಯ ಕಾಯಕದ ಮಹತ್ವವನ್ನು ಮುಂದಿಟ್ಟುಕೊಂಡು ಪಡೆದ ವಿಶಾಲತೆ, ವೈವಿಧ್ಯಪೂರ್ಣತೆ, ಸಾಂಘಿಕ ಶಕ್ತಿ, ನಿಜನೆಲದ ವಾಸನೆ ದಾಸ ಸಾಹಿತ್ಯದಲ್ಲಿ ಇಲ್ಲ. ವಚನಕಾರರಲ್ಲಿ ಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ, ಸಿದ್ದರಾಮ, ಮೊದಲಾದ ಪ್ರಸಿದ್ದರ ಜೊತೆ ಜೊತೆಯಲ್ಲಿಯೇ ಸಮ ಸಮವಾಗಿ ವ್ಯಕ್ತಗೊಳ್ಳುವ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಆಯ್ದಕ್ಕಿ ಮಾರಯ್ಯ ಮುಂತಾದವನ್ನು ಮರೆಯುವಂತಿಲ್ಲ. ಇಲ್ಲಿಗೆ ಬಡವರು, ಬಲ್ಲಿದರು, ಮೇಲ್ಜಾತಿಯವರು, ಕೆಳಜಾತಿಯವರು, ಅಷ್ಟೆ ಯಾಕೆ, ಕನಿಷ್ಟ ವೃತ್ತಿಯ ಹೆಂಗಸರು ಕೂಡ ಬಂದು ಕೂಡುತ್ತಾರೆ. ಕೂಡಿ ಈ ಚಳವಳಿಯಲ್ಲಿ ಸಮಪಾಲು

ಪಡೆಯುತ್ತಾರೆ. ಆದರೆ ದಾಸ ಸಾಹಿತ್ಯಕ್ಕೆ ಈ ಮಾತು ಅನ್ವಯಿಸುವುದಿಲ್ಲ ವಾಸ್ತವ ಬದುಕಿಗೆ ಮುಖಿಯಾಗದೆ ಬಾಳಾಟಕ್ಕೊಂದು ಕ್ರಿಯೆಯೇ ಇಲ್ಲದ (ಅಲ್ಲಿ ಕಾಯಕ ಆದಂತೆ) ಒಂದು ಬಗೆಯ ಹೊಂದಾಣಿಕೆಯ ಐಹಿಕ ಸಂಬಂಧವನ್ನು ಕಡಿದುಬಿಡು ಎಂದು ದೇವರಲ್ಲಿ ಮೊರೆಹಿಡುತ್ತಾ ಭಕ್ತಿಯ ಪಾರಮ್ಯವನ್ನು ಸಾರುತ್ತಾ ತತ್ತ್ವ ಪ್ರಜ್ಞೆಗಷ್ಟೇ ಮಿತಿಗೊಂಡ, ಸಮಾಜದ ಇತರೆ ಶೂದ್ರ ವರ್ಗದ ಧನಿಯನ್ನು ಒಳಗುಮಾಡಿಕೊಳ್ಳಲಾದ ದಾಸಸಾಹಿತ್ಯದ ಪರಂಪರೆಯನ್ನು ಸಾಮಾಜಿಕ ಹೊರಗಿಟ್ಟು ನೋಡಿದಾಗ ಇದು ಸ್ಪಷ್ಟವಾಗುತ್ತದೆ.

ಹೀಗಾಗಿ ವಚನ ಸಾಹಿತ್ಯದ ಇದಿರಿಟ್ಟು ದಾಸ ಸಾಹಿತ್ಯವನ್ನು ನೋಡಿದರೆ ಇದೊಂದು ಪ್ರಬಲ ಚಳವಳಿಯಾಗುವುದರಲ್ಲಿ ಆಶಯ ಆಯಾಮಗಳ ದೃಷ್ಟಿಯಿಂದಲೂ ಎಷ್ಟು ದುರ್ಬಲವಾದುದ್ದು ಎಂದು ಗೊತ್ತಾಗುತ್ತದೆ. ಆದ್ದರಿಂದ ಸಮಾನ ಎಳೆಯೆಂದು ಗುತಿಸಬಹುದಾದ ಧಾರ್ಮಿಕ ಕಾರಣದಿಂದಲೂ ಇವೆರಡು ಪಂಥಗಳಲ್ಲಿ ಹೋಲಿಸುವುದು ಕೂಡ ಕಷ್ಟವಾಗುತ್ತದೆ.

ಆದರೆ ಇದಕ್ಕೆ ಅಪವಾದವೆಂಬಂತೆ ಕನಕದಾಸ ದಾಸ ಪರಂಪರೆಯನ್ನು ಒಪ್ಪಿಕೊಂಡು ಮತ್ತೆ ಆ ಪರಂಪರೆಯ ಜನ ಒಡ್ಡಿದ ವಿರೋಧಗಳನ್ನೆಲ್ಲ ಇದಿರಿಸುತ್ತಲೇ ಬೆಳೆದದ್ದು ನಮ್ಮ ಕುತೂಹಲವನ್ನು ಕೆರಳಿಸುವ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ಕನಕದಾಸರ ಮಹತ್ವವನ್ನು ಅರಿಯಲು ಸಾಧ್ಯ ಮಾಡಿಕೊಳ್ಳಬಹುದು.

ಕನಕದಾಸ ವಿಜಯನಗರ ಸಾಮ್ರಾಜ್ಯದ ಅಪಾರ ವೈಭವದ ಅದ್ಭುತ ಶಕ್ತಿ-ಸಂಚಯನದ ಕಾಲದಲ್ಲಿ ಒಬ್ಬ ಪಾಳೆಗಾರನಾಗಿದ್ದರು. ಆ ಬದುಕಿನ ಎಲ್ಲಾ ಸವಲತ್ತುಗಳನ್ನು ಉಂಡವರು. ಆತ ರಸಿಕ, ಸಾಹಸಿ. ತನ್ನ ಕೆಲಸದಲ್ಲಿ ಶ್ರದ್ಧೆ ರೂಢಿಸಿಕೊಂಡಿದ್ದವರು. ಇದೆಲ್ಲ ಅವರ ವಾಸ್ತವ ಬದುಕಿನ ಸ್ಥಿತಿ. ಅವರು ಕಂಡುಕೊಂಡಿದ್ದ ರೀತಿ ಆಮೇಲಿನ ಘಟನೆಗಳು ಕನಕದಾಸರ ವಾಸ್ತವ ಬದುಕಿನ ಮೇಲೆ ಪರಿಣಾಮ ಬೀರುತ್ತವೆ. ಪ್ರೀತಿಯ ಅಪ್ಪ, ಅಕ್ಕರೆಯ ಅವ್ವ, ನೆಚ್ಚಿನ ಹೆಂಡತಿ (ಕೊನೆಗೆ ಮಗ ಕೂಡ ಅನ್ನುತ್ತಾರೆ) ಹೇಗೇ ಒಬ್ಬರಾದ ಮೇಲೆ ಒಬ್ಬರನ್ನು ಕಳೆದುಕೊಳ್ಳುತ್ತಾರೆ. ಇವು ಕನಕದಾಸರಲ್ಲಿ ಬಹು ಘಾಸಿಯುಂಟು ಮಾಡಿದ ಘಟನೆಗಳು. ಮುಂದೊಮ್ಮೆ ಯುದ್ಧವೊಂದರಲ್ಲಿ ತಾನು ವಿಶ್ವಾಸವಿಟ್ಟಿದ್ದ ತೋಳ್ಬಲವು ನುಚ್ಚು ನೂರಾಗುತ್ತದೆ. ಈ ಎಲ್ಲಾ ಆಘಾತಗಳ ಪರಿಣಾಮ ಕನಕದಾಸರಿಗೆ ಗೊಂದಲ ಹುಟ್ಟಿರಬೇಕು. ಹೀಗೆ ದಿಙ್ಮೂಢನಾದ, ಅತಂತ್ರ ಸ್ಥಿತಿಯಲ್ಲಿ ಕನಲಿದ ಕನಕದಾಸರಿಗೆ ಆ ಹೊತ್ತಿಗೆ ಪ್ರಭಾವಶಾಲಿಯಾಗಿದ್ದ ವ್ಯಾಸರಾಯನ ಮುಖಂಡತ್ವದ ವೈಷ್ಣವ ಧರ್ಮ ಸಹಜವಾಗಿ ಆಕರ್ಷಿಸಿತು. ಬದುಕಿನ ತಲ್ಲಣಕ್ಕೆ ಪ್ರತಿಸ್ಪಂಧಿಸಿದ ಕನಕದಾಸರ ದೈವ ಬಲಕ್ಕೆ ಶರಣಾಗಿರುವುದನ್ನು ನಾವು ಸುಲಭವಾಗಿ ಊಹಿಸಬಹುದು.

ಕನಕದಾಸರು ಸಾಮಾಜಿಕ ಬದುಕನ್ನು ಒಬ್ಬ ಕವಿಯಾಗಿ ಗ್ರಹಿಸಿಕೊಂಡ ಕ್ರಮದಲ್ಲಿ ಅವರ ಕೀರ್ತನೆಗಳು ಯಶಸ್ವಿಯಾಗುತ್ತವೆ ಎಂಬುವುದು ಮುಖ್ಯ ಸಂಗತಿ. ಸಮಾಜದಲ್ಲಿ ತುಂಬಿ ತುಳುಕುತ್ತಿರುವ ಕಂದಾಚಾರ ಮೌಢ್ಯಗಳ ವಿಚಾರ ಬಂದಾಗ, ಬಡವ-ಬಲ್ಲಿದರೆಂಬ ಅಸಮಾನತೆಯನ್ನು ಕಂಡಾಗ, ಜಾತಿ ಎಂಬುವುದು ಬೆನ್ನು ಹಿಡಿದು ಕಾಡುವಾಗ ಅವನು 'ದಾಸ'ನಾಗುವುದಿಲ್ಲ. ಈ ದಿಟ್ಟತನಕ್ಕೆ ಪ್ರೇರಣೆಯಾಗುವುದು ಅವನ ಅನುಭವ. ಆ ಅನುಭವವನ್ನು ಗ್ರಹಿಸಿಕೊಂಡ ಅವನ ಕವಿ ಹೃದಯ. ಅವನು ಸಂತನೇ ಆಗಿ ಉಳಿದುಬಿಟ್ಟರೆ ಈ ರಚನೆಗಳಿಗೆ ಒಂದು ಬಗೆಯ ಉತ್ಕಟನೆ, ಅರ್ಥಪೂರ್ಣತೆ ಬರಲು ಸಾಧ್ಯವಾಗುತ್ತಿರಲಿಲ್ಲ. ಇಂಥ ಸಂದರ್ಭಗಳಲ್ಲಿ ಕನಕದಾಸ ಮೊದಲು ಕವಿಯಾಗುತ್ತಾರೆ. ಆನಂತರ ದಾಸನಾಗುತ್ತಾರೆ ಅನ್ನುವುದು ಮುಖ್ಯ. ಈ ಮಾತನ್ನು ಕೀರ್ತನೆಯೊಂದರಿಂದಲೇ ಚರ್ಚಿಸಬಹುದು.

**ಕುಲ ಕುಲ ಕುಲವೆನ್ನುತಿಹರು**

**ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ||**

**ಕೆಸರೊಳು ತಾವರೆ ಪುಟ್ಟಲು ಅದ ತಂದು**

**ಬಿಸಜನಾಭನಿಗರ್ಪಿಸಲಿಲ್ಲವೆ |**

**ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು**

**ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ||**

**ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ**

**ತೆಗೆದು ಪೂಸುವರು ಭೂಸುರರೆಲ್ಲರು |**

**ಬಗೆಯಿಂದ ನಾರಾಯಣನ್ಯಾವ ಕುಲದವ**

**ಅಗಜವಲ್ಲಭನ್ಯಾತರ ಕುಲದವನು ||**

**ಆತ್ಮ ಯಾವ ಕುಲ ಜೀವ ಯಾವ ಕುಲ**

**ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ ।**

**ಆತ್ಮಾಂತರಾತ್ಮ ನೆಲೆಯಾದಿಕೇಶವ**

**ಆತನೊಲಿದ ಮೇಲೆ ಯಾತರ ಕುಲವಯ್ಯ ॥**

ಕನಕದಾಸರು ಕೆಳಜಾತಿಯಲ್ಲಿ(ಕುರುಬರು) ಹುಟ್ಟಿಬಂದ ಕಾರಣಕ್ಕೆ ಅವನ ಜಾತಿಯೇ ಹೆಜ್ಜೆ ಹೆಜ್ಜೆಗೂ ಕಾಲ್ತೊಡಕಾಗಿದೆ. ಈ ಜಾತಿಯ ಸಮಸ್ಯೆಯನ್ನು ಆಮೂಲಾಗ್ರವಾಗಿಯೇ ಪರಿಗಣಿಸುತ್ತಾರೆ. ಈ ಸಮಸ್ಯೆ ಕವಿಯ ಮನಸ್ಸಿನಲ್ಲಿ ವ್ಯಕ್ತಗೊಳ್ಳುವ ಕ್ರಮವೇ ಅದು. ಸತ್ಯಸುಖವುಳ್ಳ ಜನರಿಗೆ ಕುಲ ಯಾವುದು ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಮೊದಲು ತಾವರೆ ಕೆಸರುಗಳ ಸಂಕೇತದ ಮೂಲಕ ಇದರ ನೆಲೆಯನ್ನು ಹುಡುಕಿ, ಆಮೇಲೆ ಪೂಜ್ಯರೆಂದು ಕರೆಸಿಕೊಳ್ಳುವವರ ಕುಲದ ಮೂಲವನ್ನು ಕೆದಕುತ್ತಾ ಅದರ ವ್ಯಾಪಕತೆಯನ್ನು ತೆರೆದು ತೋರಿಸುತ್ತಲೇ ಆಡುವವರ ಇಬ್ಬಂದಿತನವನ್ನು ಬಹು ಸೂಕ್ಷ್ಮವಾಗಿ ಆದರೆ ಸಶಕ್ತವಾಗಿ ದಾಖಲಿಸುತ್ತಾರೆ. ಕನಕದಾಸನ ದನಿ ಕೇವಲ ವಿಷಾದಪೂರ್ಣವಾಗುವುದಿಲ್ಲ; ಅದರಲ್ಲಿ ಉದಾತ್ತಸಿಟ್ಟು ಇದೆ. ಇದೇ ಅವನ ಅಭಿವ್ಯಕ್ತಿಗೆ ಹೆಚ್ಚು ನಿಖರತೆಯನ್ನು ತಂದುಕೊಡುವುದು. ಈ ಜಾತಿಯ ಸಮಸ್ಯೆ ಉಪದೇಶ ಮಾತ್ರವಾದ ಸಾರ್ವತ್ರಿಕ ಜಾಡ್ಯವಾಗಷ್ಟೇ ಅವನಿಗೆ ಕಾಣುತ್ತಿಲ್ಲ. ಅವನಿಗಿದು ವೈಯಕ್ತಿಕ ಸಮಸ್ಯೆ ಆಗಿದೆ. ಅದು ಅವನಿಗೆ ಉಸಿರು ಕಟ್ಟಿಸುತ್ತಿರುವುದರಿಂದಲೇ ಜಾತಿಯ ಆಳ-ಅಗಲಗಳನ್ನು, ಅದರ ಸೋಗಿನಲ್ಲಿ ನಡೆದಿರುವ ಇಬ್ಬಂದಿತನವನ್ನು ಹೆಚ್ಚು ಸ್ಪರ್ಶಿಸಿ ಛಾಪಿಸುತ್ತಾರೆ.

ಈ ಮಾತನ್ನು ಇನ್ನೊಬ್ಬ ದಾಸರೊಂದಿಗೆ ಹೋಲಿಸಿ ನೋಡಬಹುದು. ಸಮಕಾಲೀನರಾದ ಪುರಂದರದಾಸರನ್ನೇ ತೆಗೆದುಕೊಳ್ಳೋಣ. ಇವರೂ ಜಾತಿಯ ವಿಚಾರಗಳನ್ನು ಅಲ್ಲಲ್ಲಿ ಆಡಿದ್ದಾರೆ.

**"ಆವ ಕುಲವಾದರೇನು ಆವನಾದರೇನು ಆತ್ಮ ಭಾವವರಿತಮೇಲೆ"**

*

**"ಕುಲದ ಮೇಲೆ ಹೋಗಬೇಡ ಕುಲವಿಲ್ಲ ಜ್ಞಾನಿಗಳಿಗೆ"**

*

**ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ**

**ಗಣಗಣ ಗಂಟಿಯ ಭಾರಿಸುವರಯ್ಯ ।**

**ತನುವಿನ ಕೋಪವೂ ಹೊಲೆಯಲ್ಲವೆ**

**ಪರಧನ ಪರಸತಿ ಹೊಲೆಯಲ್ಲವೆ ।**

**ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ**

**ಇದಕೇನು ಇದ್ದೋ ಪುರಂದರ ವಿಠಲ ।**

–ಮುಂತಾದವುಗಳನ್ನು ಗಮನಿಸಿ. ಅನುಭವಿಸಿಬಂದ ಉದ್ಗಾರ ಇಲ್ಲಿದೆ ಅನಿಸುವುದಿಲ್ಲ. ಆವ ಕುಲವಾದರೇನು ಎಂಬಲ್ಲಿಯಾಗಲೀ ಕುಲದ ಮೇಲೆ ಹೋಗಬೇಡ ಎಂಬಲ್ಲಿಯಾಗಲೀ ಪುರಂದರದಾಸ ಸಮಸ್ಯೆಯನ್ನು ಅನುಭವಿಸಿ ಮಾತನಾಡುತ್ತಿದ್ದಾರೆ ಅನಿಸುವುದಿಲ್ಲ. ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ ಇದಕೇನು ಮದ್ದೋ ಎನ್ನುವಲ್ಲಿ ಇದರ ಜಾರಿಕೆಯನ್ನು ಕಾಣಬಹುದು. ಉಪದೇಶ ಮಾತ್ರವಾದ ಮನಸ್ಸಿನ ಪ್ರತಿಕ್ರಿಯೆ ಇದು ಅನಿಸುತ್ತದೆ.

ಕನಕದಾಸರು ತಮ್ಮ ಅಭಿವ್ಯಕ್ತಿಗೆ ಪೂರಕವಾಗಿ ದುಡಿಸಿಕೊಳ್ಳುವ ಇನ್ನಿತರೆ ಅಂಶಗಳನ್ನು ಗಂನಿಸಬಹುದು. ದಾಸಪರಂಪರೆಯ ಇತರೆ ದಾಸರಿಗಿಂತ ಕನಕದಾಸ ಭಿನ್ನವಾದದ್ದು, ಮಿಗಿಲಾದದ್ದು ಅವರ ಕೆಳಸ್ತರದಲ್ಲಿ ಹುಟ್ಟಿಬಂದ ಕಾರಣಕ್ಕೆ ಅಂತ ಹೇಳುವುದು ಕನಕದಾಸರಿಗೆ ನ್ಯಾಯ ನೀಡಿದಂತಾಗುವುದಿಲ್ಲ. ಅವನ ಜಾನಪದೀಯತೆ ಕೂಡ ಕೆಲಸ ಮಾಡುವ ರೀತಿಯಲ್ಲಿ ಈ ವಿಶೇಷತೆಯನ್ನು ಪರಿಗಣಿಸಬಹುದು. ಲೌಕಿಕ ಬದುಕಿನ ಕ್ಷಣಿಕತೆಯನ್ನು ಹೇಳುತ್ತಲೇ ಹೇಗೆ ಕವಿಯ ಈ ಜಾನಪದೀಯ ಮನಸ್ಸು ದುಡಿಯುತ್ತದೆ. ಈ ರಚನೆಗಳನ್ನು ಪೂರಕವಾಗಿ ನೋಡಬಹುದು.

**"ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು**

**ನಿರ್ಮಲಿಲ್ಲದ ಮನಸು ತಾ ಕೊಳಚೆಹೊಲಸು"**

*

**"ಮೊಲೆ ಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ**

**ಬೆಲೆ ಬಿದ್ದ ಸಂಕಿನೊಳು ಲಾಭವುಂಟೆ"**

*

**"ಬತ್ತಿ ಹೋಯಿತು ನದಿ ಬಿತ್ತದೆ ಬೆಳೆಯದೆ**

**ಅತ್ತರೆ ಬಹುದೇನೊ ಉತ್ತಮ ಫಲಸೂಸಿ"**

ವೈದಿಕ ಬಂಧನಕ್ಕೆ ಬಿಗಿದುಕೊಳ್ಳಬೇಕಿದ್ದ ಸಂದರ್ಭದಲ್ಲೂ ಕನಕದಾಸರು ತನ್ನ ಸ್ವತಂತ್ರ ನಿಲುವನ್ನು ವಿಮರ್ಶಕಗುಣವನ್ನು ಬಿಟ್ಟುಕೊಡುವುದಿಲ್ಲ. ಇಲ್ಲಿ ಕಲೆಗಾರನೊಬ್ಬ ಬದುಕಿನೊಳಗೆ ಚಿಪ್ಪು ಕಟ್ಟಿಕೊಂಡ ಆಷಾಢಭೂತಿ ಜನರ ಮುಖವಾಡಗಳನ್ನು ವಿಕಾರಗೊಳಿಸದೆ ನೋಡುಗರಿಗೆ ಬಿಚ್ಚಿ ತೋರಿಸುವ ಕ್ರಮವಿದೆ. ನಮ್ಮೆಲ್ಲ ಮನಸ್ಸಿನೊಳಗೆ ಗೂಡುಕಟ್ಟಿಕೊಂಡಿರುವ ಈ ಹದ್ದು ಕಾಗೆ ನರಿ ನಾಯಿಗಳು ನಮ್ಮನ್ನು ಮನುಷ್ಯರಾಗಲು ಬಿಡುವುದಿಲ್ಲ. ಅವುಗಳನ್ನು ನಾವೇ ಸಲಹುತ್ತಿದ್ದೇವೆ. ಅವುಗಳನ್ನು ಕಳೆದುಕೊಳ್ಳುವುದೆಂದರೆ ನಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವುದೆಂದೇ ಅರ್ಥ. ಇದು ಸಮಾಜದಲ್ಲಿ ಪ್ರತಿಷ್ಠಿತರೆಂದುಕೊಂಡ ಜನರ ಬದುಕು. ಈ ಬದುಕನ್ನು ಕನಕದಾಸ ನಿಚ್ಚಳವಾಗಿ ಗುರುತಿಸಿ ಬಯಲು ಮಾಡುತ್ತಾನೆ.

**'ತೀರ್ಥವನು ಪಿಡಿಸವರೆಲ್ಲ ತಿರುನಾಮಧಾರಿಗಳೇ'**

**'ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೇ'**

**'ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೇ'**

**'ಭಂಗಿ ಮುಕ್ಕಗಳೆಲ್ಲ ಲಿಂಗವಂತರಹರೆ'**

**'ಜಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ' ।**

**'ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೆ'**

**'ವೇಷಧಾರಿಗಳೆಲ್ಲ ಸನ್ಯಾಸಿಗಳಾಬಲ್ಲರೆ'**

ಮೌಢ್ಯ ಕಂದಾಚಾರಗಳು ಬಡಜನರ ಉದ್ಧಾರಕ್ಕೆ ಪೂರಕವಾಗಲಾರವು. ಅವರ ಅವಿರತ ಶೋಷಣೆ ತಪ್ಪದು. ಅವರಲ್ಲಿರುವ ಮೌಢ್ಯ ಹೋಗದೆ ತಿಳಿವಳಿಕೆಬಾರದು. ತಿಳಿವಳಿಕೆ ಇಲ್ಲದೆ ಜೀವನ ಸುಧಾರಿಸದು. ಜೀವನ ಸುಧಾರಿಸದೆ ಸಮಾಜ ತನ್ನ ಆರೋಗ್ಯಕರ ಸಮತೋಲನವನ್ನು ಕಾಪಾಡಿಕೊಳ್ಳದು. ಆದರೆ ಮೇಲೇರಿದ ಜನ ಕೆಳವರ್ಗದವರನ್ನು ಅಲ್ಲೇ ಉಳಿಸುವ ಕುತಂತ್ರದಲ್ಲಿ ಈ ಕ್ರಿಯೆ ನಿರಂತರಗೊಂಡಿದೆ. ಕನಕದಾಸರು ಇಂಥ ಸ್ವಾರ್ಥ ಬದುಕು ಬೇಡವೆನ್ನುತ್ತಾನೆ. "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ" ಎಂಬ ಇವನ ಕೀರ್ತನೆ ಸಮಾಜದ ಒಟ್ಟು ಬದುಕಿನ ಹಿಂದಿರುವ ಸ್ವಾರ್ಥವನ್ನು ಸಮರ್ಥವಾಗಿ ಚಿತ್ರಿಸುತ್ತದೆ. ಹಾಗಾದರೆ ಈ ಸಮಾಜವನ್ನು ಬೆಳೆಸುವ ಕುಡಿಗಳು ಹೇಗಿರಬೇಕು. ಇದಕ್ಕೆ ಕವಿಯ ಅಪೇಕ್ಷೆ ಇದು :

**ಸತ್ಯನೊಬ್ಬ ಮಗ ಶಾಂತನೊಬ್ಬ ಮಗ ।**

**ದುರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬನು ॥**

**ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ ।**

**ಹೆತ್ತರೇನು ಇನ್ನು ಹೆರದಿದ್ದರೇನಯ್ಯ ॥**

ಈ ಪದ್ಯದಲ್ಲಿರುವ ಕವಿಯ ಬಂಡಾಯ ಧ್ವನಿಯನ್ನು ಗಮನಿಸಬೇಕು. 'ನಾ ಪುತ್ರಸ್ಯ ಗತಿರ್ನಾಸ್ತಿ' ಎಂದು ಅಖಂಡವಾಗಿ ನಂಬಿ ಬಂದ ಸಂಪ್ರದಾಯವನ್ನೇ ಪ್ರಶ್ನಿಸುತ್ತಾನೆ. ಒಳ್ಳೆಯ ಆಚಾರವಿಲ್ಲದ ಮನುಷ್ಯನಿಗೆ ಮಗನಿದ್ದರೂ ಸದ್ಗತಿ ಇಲ್ಲ ಎಂಬುದನ್ನು ಕನಕದಾಸ ಸ್ಪಷ್ಟವಾಗಿ ಆಚಾರವಿಲ್ಲದೆ ಹೇಳುತ್ತಾರೆ.

ಸ್ವಾರ್ಥಪರವಾದ ಮನುಷ್ಯ ಅದರ ಸಿದ್ಧಿಗಾಗಿ ಏನೆಲ್ಲ ಅನಿಷ್ಟ ಸಂಪ್ರದಾಯವನ್ನು ಹುಟ್ಟುಹಾಕಿಕೊಳ್ಳುತ್ತಾನೆ ಎಂಬುದನ್ನು ಕನಕದಾಸ ತಿಳಿಸಿದ್ದಾನೆ. ಮನಸ್ಸು ಮುಕ್ತಿಯನ್ನು

ಪಡೆಯಬೇಕೆಂದರೆ ಮೇಗಣ ಲೋಕಕ್ಕೆ ತೆರಳುವುದೆಂದೆಲ್ಲ, ಕೆಟ್ಟವಿಚಾರಗಳಿಂದ ಮುಕ್ತವಾಗುವುದು ಎಂದು. ಇಂಥ ಮುಕ್ತಿಯನ್ನು ಬಯಸುವ ಮೌಢ್ಯತನವನ್ನು ಕನಕದಾಸ ಕೆದಕುತ್ತಾರೆ.

**ಎಕ್ಕನಾತಿಯರ ಕಾಟ ಜಕ್ಕಿಯರು ಕನ್ಯೆಯರು ।**

**ಸೊಕ್ಕಿನಿಂದ ಸೊಂಟಮುರುಕ ಬೈರೇ ದೇವರು ॥**

**ಮಿಕ್ಕ ಮಾರಿ ಮಸಣಿ ಚೌಡಿ ಮೈಲಾರಿ ಮೊದಲಾದ । ಇಂಥ ಠಕ್ಕು**

**ದೈವದ ಗೊಡುವೆ ಬೇಡ ನರಕ ತಪ್ಪದು ॥**

ಇಂಥ ಕಂದಾಚಾರದಿಂದ ಮನುಷ್ಯಕುಲ ಹಸನಾಗುವುದಿಲ್ಲ. ಮಾರಿ ಮಸಣಿಗಳ ಆಶ್ರಯಿಸುತ್ತಾ ಮನುಷ್ಯ ತಾನೂ ಕ್ರೂರಿಯಾಗುತ್ತಾನೆ. ಇಂಥ ಅನಾಚಾರ ಸಮಾಜಕ್ಕೆ ಕಂಟಕಪ್ರಾಯ ಎಂಬ ಎಚ್ಚರಿಕೆ ಅವರದು.

ತಮ್ಮ ಧರ್ಮಕ್ಕೆ ವಿರುದ್ಧವೆನಿಸುವ ಇತರ ಧರ್ಮಗಳ ಆಚರಣೆಗಳನ್ನು ನಂಬಿಕೆಗಳನ್ನು ಎಲ್ಲರೂ ಟೀಕಿಸಿದ್ದಾರೆ, ವಿಡಂಬಿಸಿದ್ದಾರೆ. ತಮ್ಮ ಧರ್ಮವೇ ಶ್ರೇಷ್ಟವೆಂದುಕೊಳ್ಳುವ ದ್ರಷ್ಟಾರರೆಲ್ಲ ತಮ್ಮದನ್ನು ಪ್ರಶ್ನಿಸಿಕೊಳ್ಳಲು ಹೋಗುವುದಿಲ್ಲ. ಆದರೆ ಕನಕದಾಸ ಯಾವ ಧರ್ಮವನ್ನಾದರೂ ವಸ್ತುನಿಷ್ಠ ದೂರದಲ್ಲಿ ನಿಂತು ನೋಡಬಲ್ಲರು. ಸಮಾನವಾಗಿ ಕಾಣಬಲ್ಲರು. ಹರಿಹರನನ್ನು ಒಂದೇ ರೀತಿಯಲ್ಲಿ ಗೌರವಿಸಬಲ್ಲರು. ಇಂಥ ಅಪರೂಪದ ಮುಕ್ತ ವಿಚಾರಮಂಥನ ಆ ಕಾಲದ ಸಾಮಾಜಿಕ ಚಿಂತನೆಯ ಇತಿಹಾಸಕ್ಕೆ ನೆರವಾಗುತ್ತದೆ. ಬದುಕಿನ ಮೂಲನೆಲೆಯನ್ನು ಗುರುತಿಸಲು ಮತ್ತು ಬಲವುಳ್ಳವರ ಕುಟಿಲತೆಯನ್ನು ಹೊರಹಾಕಲು ಕನಕದಾಸ ಮಾಡಿದ ಈ ಬಗೆಯ ಪ್ರಯತ್ನ ಅವರಲ್ಲಿದ್ದ ನಿಷ್ಠುರ ಸಾಮಾಜಿಕ ಪ್ರಜ್ಞೆಯ ನೈಜ ಅಭಿವ್ಯಕ್ತಿ ಹೌದು. ಆದರೂ ತಾನುಂಡ ನೋವು ವಿಷಾದಗಳನ್ನು ಕೇವಲ ಆಕ್ರೋಶದ ಮಾತಾಡಿ ತೀರಿಸಿಕೊಳ್ಳದೆ ಅದನ್ನು ಸಾಹಿತ್ಯವಾಗಿಸಿ ಆ ಸಾಹಿತ್ಯದ ಮೂಲಕ ಈ ಸಾಮಾಜಿಕ ಜೀವನವನ್ನು ದರ್ಶಿಸಿದ ರೀತಿ ಗಮನಾರ್ಹವಾಗುತ್ತದೆ. ಇವತ್ತಿನ ಎಲ್ಲ ಆದುನಿಕ ಸವಲತ್ತುಗಳನ್ನು ಬೆಂಬಲವಾಗಿಸಿಕೊಂಡು ಮಾತನಾಡುವ ಕೆಳವರ್ಗದವನೊಬ್ಬನಿಗೂ ಇಂಥಾದ್ದೇನೊ ಇಲ್ಲದೆ ಅಂದು ಮಾತಾಡಿದ ಕನಕದಾಸರ ದನಿಗೂ ಇರುವ ಅಂತರವನ್ನು ಆಶಯವನ್ನು ಗಮನಿಸಬೇಕು.

ಈ ರೀತಿಯ ವಿಚಾರಗಳನ್ನು ಶೋಧಿಸುತ್ತ ಜೀವನದ ಅರ್ಥ ಹುಡುಕತೊಡಗಿದ ಕನಕದಾಸನರ ಜಾನಪದ ಮನಸ್ಸು ಕೊನೆಗೆ ವಾಸ್ತವಕ್ಕೆ ಒತ್ತು ಕೊಡಲಾಗದೆ, ಆಧ್ಯಾತ್ಮಿಕ ಗುಹ್ಯ ರಹಸ್ಯದಿಂದ ಬಿಡಿಸಿಕೊಳ್ಳದಾಯಿತು.

**'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು'**

*

**ಆಸೆ ತರವಲ್ಲ ದಾಸನಾಗೋ । ಭವಪಾಶ ನೀಗೊ**

**ಶರೀರ ತಾನಲ್ಲ ತನ್ನದಲ್ಲ ॥**

**ಆವಬಲವಿದ್ದರೇನು ದೈವ ಬಲವಿಲ್ಲದವರಿಗೆ**

ಹೀಗೆ ವಿರಕ್ತಿಯ ತೊರೆ ಸ್ಥಾಯಿಯಾಗಿ ಹರಿಯುವುದನ್ನು ಕಾಣುತ್ತೇವೆ. ಕಣ್ಣು ಮುಚ್ಚಿಕೊಂಡು ಪರಂಪರೆಗೆ, ಬಂದ ಕರ್ಮಕ್ಕೆ ತಲೆಯೊಡ್ಡುವುದೊಂದೇ ಕಡೆಯ ದಾರಿ ಎಂಬ ಆತ್ಯಂತಿಕ ನಿಲುವಿಗೆ ಬರುವುದನ್ನು ಕಾಣುತ್ತೇವೆ. ಕನಕದಾಸರ ಜಾನಪದ ಮನಸ್ಸಿನ ಈ ಆರ್ತತೆ, ಶೋಧನೆ, ಹಂಬಲಿಕೆಗಳೆಲ್ಲ ಕೊನೆಗೊಮ್ಮೆ ವ್ಯಕ್ತಿನಿಷ್ಠವಾಗಿಬಿಡುತ್ತವೆ.

ಶೂದ್ರ ಕನಕದಾಸರನ್ನು ಅಂದಿನ ಸಮಾಜ ಅವರ ಪಾಂಡಿತ್ಯ, ಪ್ರತಿಭೆ, ಅನುಭಾವಗಳ ಪ್ರಭಾವವನ್ನು ಕಂಡೂ ಮುಕ್ತಿವಾಗಿ ಸ್ವೀಕರಿಸಲು ಮುಂದಾಗಲಿಲ್ಲ ಇದಕ್ಕೆ ಕೊಡುವ ಕಾರಣ ಒಂದೇ ಒಂದು; ಜಾತಿ, ಆಗ ಕನಕದಾಸರು ಕುಲವನ್ನೇ ಪ್ರಶ್ನಿಸಲು ಮುಂದಾದರು–

**'ಕುಲಕುಲವೆನ್ನುತಿಹರು**

**ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ'**

**'ಕುಲಕುಲವೆಂದು ಹೊಡೆದಾಡದಿರಿ ನಿಮ್ಮ**

**ಕುಲದ ನೆಲೆಯನೇನಾದರು ಬಲ್ಲಿರಾ'**

'ಯಾತರದವನೆಂದುನೆರಲಿ' ಈ ಮೂರು ಕೀರ್ತನೆಗಳಲ್ಲಿಯೂ ಜಾತಿ ಎಂದರೇನು ಎಂಬುದರ ಬಗ್ಗೆ ವ್ಯಾಖ್ಯಾನ ಮಾಡಿ ಜನರಿಗೆ ಜಾತಿ ವಿಷಯ ತಿಳಿಸಿದ್ದಾರೆ. ೧೦ನೆಯ ಶತಮಾನದಲ್ಲಿಯೇ ಆದಿಕವಿ ಪಂಪನೂ ಕೂಡ ಕುಲ ಎಂದರೇನು ಎಂಬುದನ್ನು ವ್ಯಾಖ್ಯಾನ ಮಾಡಿದ್ದಾನೆ–

**"ಮಾನವ ಕುಲಂ ತಾನೊಂದೇ ವಲಂ"**

**"ಕುಲಂಕುಲ ಮಲ್ತು, ಚಲಂಕುಲಂ, ಗುಣಕುಲಂ, ಅಭಿಮಾನವೊಂದೆಕುಲಂ,**

**ಅಣ್ಮುಕುಲಂ"** ಎಂದಿದ್ದಾರೆ.

ಹೀಗೆ ಕೀರ್ತನೆಗಳು ಉಲ್ಲೇಖವು ನಮ್ಮ ಸಾಮಾಜಿಕ ಮೌಲ್ಯ ವ್ಯವಸ್ಥೆ ಮತ್ತು ಮೌಲ್ಯ ಶ್ರೇಣಿಗಳ ಪ್ರಕಟನೆಯಲ್ಲಿ ನೆರವಾಗುತ್ತದೆ. ಸಾಮಾಜಿಕ ಚಿಂತನೆಯ ಸ್ವರೂಪ ಪ್ರಕಟಗೊಳ್ಳುತ್ತದೆ. ಉತ್ತಮ ಕುಲದವರು ಎನ್ನುವವರೆಲ್ಲ ಕೀಳು ಮಟ್ಟದ ವಸ್ತುಗಳನ್ನು ಬಳಸುತ್ತಾರೆ ಎನ್ನುವುದಕ್ಕೆ ಇಲ್ಲಿ ಮೂರು ದೃಷ್ಟಾಂತರಗಳು ಇವೆ. ಕೆಸರಲ್ಲಿ ಹುಟ್ಟಿದ ತಾವರೆ, ಹಸುವಿನ ಹಾಲು, ಕಸ್ತೂರಿ ಸುಗಂಧ, ಇವೆಲ್ಲವೂ ಶೂದ್ರನಿಗಿಂತ ಕೆಳಮಟ್ಟದಲ್ಲವೇ ಒಂದೇ ಅಲ್ಲವೇ ಎಂಬುವುದನ್ನು ಹೇಳುತ್ತಾರೆ.



ಸಾಧು–ಸನ್ಯಾಸಿ, ದಾಸ–ಜಂಗಮ ಮುಂತಾದ ವೇಷಗಳ ಮೂಲಕ ಜಗತ್ತಿನಲ್ಲಿ ನಡೆಯುತ್ತಿರುವ ಕಪಟ, ವಂಚನೆ, ದುರ್ವ್ಯವಹಾರಗಳಿಗೆ ಲೆಕ್ಕವೇ ಇಲ್ಲ. ತಾವೇ ಕಂಡ ಅಂಥ ದುಷ್ಕೃತ್ಯಗಳನ್ನು ಕನಕದಾಸರು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಾರೆ.

**"ಜಪವ ಮಾಡಿದರೇನು, ತಪವ ಮಾಡಿದರೇನು**

**ಕಪಟ ಗುಣ ವಿಪರೀತ ಕಲುಷವಿದ್ದವರು"**

ಎಂದು ಪ್ರಶ್ನಿಸುತ್ತಾರೆ. "ನೇಮವಿಲ್ಲದ ಹೋಮವೇತಕಯ್ಯ" ಎಂದು ಡಾಂಭಿಕತನವನ್ನು ವೃತ್ತಿಯಲ್ಲಿ ಪ್ರದರ್ಶಿಸುವುದನ್ನು ಖಂಡಿಸುವರು. ಇಡೀ ಮನುಕುಲವನ್ನು ಸಮ ದೃಷ್ಟಿಯಿಂದ ನೋಡುವ ಕನಕದಾಸರಿಗೆ ಮುಸ್ಲಿಂರಾಗಲಿ, ವೈಷ್ಣವರಾಗಲಿ, ಲಿಂಗಾಯುತರಾಗಲಿ ಪ್ರಾಮಾಣಿಕವಾಗಿ ಆ ಮತಗಳ ಅನುಯಾಯಿಗಳ ಡಾಂಭಿಕತನವನ್ನು ಟೀಕೆಗೆ ಒಳಗು ಮಾಡುತ್ತಾರೆ. 'ತೀರ್ಥವ ಪಡಿದವರೆಲ್ಲ ತಿರುನಾರಾಯಣನ ನಾಮದಾರಿಗಳೆ' ಎಂದು ಎಲ್ಲಾ ಮತದವರ ಡಂಭತನವು ಅಂದಿನ ಸಮಾಜದಲ್ಲಿ ಕಲುಷಿತಗೊಂಡಿದ್ದವೆಂದು ನಾವು ತಿಳಿಯಬಹುದಾಗಿದೆ. ಇಲ್ಲಿ ಪರಿಸರದಲ್ಲೂ ಕನಕದಾಸರು ಲೋಕ ಜೀವನವನ್ನು ವ್ಯಾಖ್ಯಾನ ಮಾಡುತ್ತಾರೆ.

**"ಎಲ್ಲರು ಮಾಡುವುದು ಹೊಟ್ಟೆಗಾಗಿ**

**ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ"**

ಈ ಕೀರ್ತನೆಯ ಮೊದಲ ಚರಣಗಳ ಮೂಲಕ ವಿವರಿತವಾಗುವ ಲೋಕ ಜೀವನದ ನೆಲೆಯಿಂದ ಮತ್ತು ಕೊನೆಯ ಚರಣದಲ್ಲಿ ಸೂಚಿತವಾಗುವ ಮುಕ್ತಿಯ ನೆಲೆಯವರೆಗೆ ಹೋಗಿ, ಲೋಕ ಜೀವನದ ಹಿಡಿತದಿಂದ ಬಿಡಿಸಿಕೊಂಡು ಇನ್ನೊಂದು ಅಧೀನಕ್ಕೆ ಒಳಗಾಗುವುದಾಗಿದೆ ಅಂದರೆ ಲೋಕವನ್ನು ಮೀರುವುದರಿಂದ ಒದಗುವ ದಿಟ್ಟತನ-ಪ್ರತಿಭಟನೆಯ ಕೆಚ್ಚು ಸಂಪ್ರದಾಯ ವಿರೋಧಿ ಧೋರಣೆ, ಆತ್ಮ ವಿಮರ್ಶೆ ಮತ್ತು ಲೋಕ ವಿಮರ್ಶೆ, ಸಾಮಾನ್ಯ ಜನರಿಗೆ ತಿಳಿಹೇಳುವುದನ್ನು ಭಾಷೆಯ ಮೂಲಕ ಮೈಗೂಡಿಸಿಕೊಳ್ಳುತ್ತಾರೆ. ಅಂದಿನ ಭಕ್ತಿ ಪಂಥದ ಈ ಲಕ್ಷ್ಯಗಳೆಲ್ಲವೂ ಕನಕದಾಸರಲ್ಲಿ ಮೈಗೂಡಿಸಿಕೊಳ್ಳುತ್ತಾರೆ. ಕನಕದಾಸರು ಗೊಡ್ಡು ಸಂಪ್ರದಾಯಗಳ ಮಧ್ಯ ಬೆಳೆದ ಆತ್ಯಾಧುನಿಕ ಎನ್ನಬಹುದಾದ ವೈಚಾರಿಕ ಮನೋಧರ್ಮವನ್ನು ಮೈಗೂಡಿಸಿಕೊಂಡಿದ್ದಾರೆ.

**"ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ**

**ಬಹುಜನರು ನೆರೆ ತಿಳಿದು ಪೇಳಿ ಮತ್ತಿದನು"**

ಎಂದು ಇಂಥ ಅನೇಕ ಕಡೆಗಳಲ್ಲಿ ಸಮಾಜದ ಜನರಿಗೆ ನೀತಿ ಬೋಧನೆಯನ್ನು ಮಾಡುವುದು ಗೊತ್ತಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಕ್ರಿಯಾಶೀಲನಾಗಿರಬೇಕು. ಇಲ್ಲವಾದರೆ ಅವನು ಒನಕೆಯ ತುಂಡು ಇದ್ದಂತೆ ಕನಕದಾಸರು ನೀತಿಯನ್ನು ಹೇಳುವುದರ ಮೂಲಕ ಸಮಾಜದ ಅಂಕುಡೊಂಕುಗಳನ್ನು ತಿದ್ದಿ, ತೀಡಿ ನಯಗೊಳಿಸಲು ನೀತಿ ಬೋಧನೆಯ ದಾಟಿಯಲ್ಲಿ ಸಮಾಜದ ಅನಿಷ್ಟಗಳನ್ನು ತೊಡೆದು ಹಾಕಿ ಜನರನ್ನು ಪರಿವರ್ತನೆಗೊಳಿಸಲು ಪ್ರಯತ್ನಿಸಿದ್ದಾರೆ. ಅದರಲ್ಲಿ ಭಾಷೆಯ ಚಡಿ ಏಟುಗಳಲ್ಲಿ ಪರಿವರ್ತನೆಗೊಳಿಸಲು ಮುಂದಾಗಿರುವುದನ್ನು ನೋಡಬಹುದಾಗಿದೆ.

**"ಏನು ಇಲ್ಲಿದ ಎರಡು ದಿನದ ಸಂಸಾರ**

**ಜ್ಞಾನದಲ್ಲಿ ದಾನ ಧರ್ಮವ ಮಾಡಿರಯ್ಯ"**

ಕೀರ್ತನೆಯಲ್ಲಿ ಹಲವು ವಿಧದ ಸದಾಚಾರ, ಸುಸಂಸ್ಕೃತಿಯ ನೇರ ಪ್ರಸ್ತಾಪವಿದೆ. ಒಂದೆಡೆ ಸಂಸಾರದ ನಿಸ್ಸಾರತೆ, ಜೀವನದ ಅನೀತ್ಯತೆ ಹೇಳುವುದರ ಮೂಲಕ ಸಾರ್ಥಕ ಬದುಕಿನ ಆಶಯವನ್ನು ಸೂಚಿಸುತ್ತದೆ. ಸಮಾಜ ಜೀವನದ ದುರ್ಭರತೆ ಇದೆ. ಆರ್ಥಿಕ ಅಸಮಾನತೆಯಿದೆ. ಅವಗುಣದ ಮೂಢ ಭಕ್ತಿ, ಲೋಭಿಯಾದ ಸಿರಿವಂತ, ಡಾಂಭಚಾರಿಯಾದ ಹರಿಭಕ್ತ, ಅಜ್ಞಾನಿಯಾದ ದುರ್ವ್ಯಸನಿ, ದಾನ-ಧರ್ಮ ಮರೆತ ಸ್ವಾರ್ಥ ಇತ್ಯಾದಿಯನ್ನು ಕನಕದಾಸರು

ಚಿಕಿತ್ಸಕ ದೃಷ್ಟಿಯಿಂದ ನೋಡಿದ್ದಾರೆ. ಇಲ್ಲಿನ ಸೌಜನ್ಯ ಪೂರ್ಣ ಮನವರಿಕೆಯ ದಾಟಿಯು ಎದ್ದು ಕಾಣುತ್ತದೆ.

**"ಡಿಂಬಿನೊಳಗೆ ಪ್ರಾಣವಿರಲು ಕಂಬಸೂತ್ರದ ಗೊಂಬೆಯಂತೆ ಎಂದಿದ್ದರೊಂದು ದಿನ ಸಾವು ತಪ್ಪದು"** ಕನಕದಾಸರು ತಮ್ಮ ಕೀರ್ತನೆಯುದ್ದಕ್ಕೂ ನೇತ್ಯಾತ್ಮಕ ಧಾಟಿಯಲ್ಲಿ ಹಣ್ಣು, ಹೊನ್ನು, ಮಣ್ಣುಗಳ ಸುತ್ತಲೂ ಅಲಂಕಾರಿಕವಾಗಿ ಸಾಮಾನ್ಯ ವಸ್ತುಗಳ ತಿರಸ್ಕಾರದಿಂದ ಅಲ್ಲಗಳೆಯುತ್ತಾರೆ. 'ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ' ಎಂಬುವುದರಲ್ಲಿಯೂ ಅವರ ಲೋಕಜ್ಞಾನದ ವ್ಯಾಪ್ತಿ ಮತ್ತು ಮನೋಭಾವದ ಪರಿಪಕ್ವತೆ ಎದ್ದು ಕಾಣುತ್ತದೆ.

**"ವರಕವಿಗಳ ಮುಂದೆ ನರಕವಿಗಳು ವಿದ್ಯೆ ತೋರಬಾರದು ಈ ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು"** ಎಂದು ಸಾಮಾನ್ಯ ನೀತಿ ನಡುವಳಿಕೆಯ ಹಾಡು. ಅರ್ಥಪೂರ್ಣವಾದ ಪ್ರಾಸ, ಅನುಪ್ರಾಸಗಳು ಮನಸ್ಸಿನ ಮೇಲೆ ತಕ್ಷಣ ಪರಿಣಾಮವನ್ನು ಬೀರುತ್ತದೆ. ಇದು ಪಡೆದುಕೊಂಡಿರುವ ಭಾವಗೀತಾತ್ಮಕತೆ, ಸಂಕ್ಷಿಪ್ತತೆ, ಉಪಮಾನಿಷ್ಠತೆ, ಉಕ್ತಿ ಸೌಂದರ್ಯ, ಲೋಕಾನುಭವ ಸಹಜ ನಿದರ್ಶನಗಳು ನೇರವಾಗಿ ಮನ ಮುಟ್ಟುವಂತೆ ಇವೆ.

ಇವೆಲ್ಲ ಕನಕದಾಸರ ಅಂದಿನ ಸಮಾಜದ ಸಾಂಸ್ಕೃತಿಕ ದಾಖಲೆಗಳಾಗಿ ಮೂಢನಂಬಿಕೆಯ ಪಳೆಯುಳಿಕೆಗಳಾಗಿ ಗೋಚರಿಸುತ್ತದೆ. "ನಮ್ಮ ಸುತ್ತ-ಮುತ್ತಲಿನ ಪರಿಸರವನ್ನು ಕಣ್ದೆರೆದು ನೋಡದ ಅವರು ಜಾತಿ ಮತಗಳ ತಾರತಮ್ಯಗಳನ್ನು, ಧರ್ಮದ ಆಚರಣೆಯ ಹಿನ್ನೆಲೆಯಲ್ಲಿರುವ ಕುಟಿಲತೆ ಕುಹಕಗಳನ್ನು ಆಧ್ಯಾತ್ಮಿಕ ಚಟುವಟಿಕೆಗಳನ್ನು ಶೋಷಣೆಯ ಜಾಣ್ಮೆಯನ್ನು ಕಂಡು ಕೆರಳುತ್ತಾರೆ. ಸಿಡಿದು ನಿಲ್ಲುತ್ತಾರೆ. ಅನೇಕ ಕೀರ್ತನೆಗಳಲ್ಲಿ ಕಂಡುಬರುವ ಅವರ ಕಟುವಾದ ಮಾತುಗಳ ಹಿಂದೆ ಅವರ ವೈಚಾರಿಕ ಮನೋ ಧೈರ್ಯ ಮಿಂಚುತ್ತದೆ. ಸಾಂಪ್ರದಾಯಿಕ ಚೌಕಟ್ಟಿನೊಳಗಿದ್ದು ಅದನ್ನು ಮೀರುವ ಈ ಮನೋಧರ್ಮದ ಹಿಂದೆ ಅಪಾರವಾದ ಮಾನವೀಯ ಅನುಕಂಪ ಸಾಮಾಜಿಕ ಕಳಕಳಿ, ಸಾಮಾಜಿಕ ಪ್ರಜ್ಞೆ, ಮಾನವೀಯ ಮಿಡಿತಗಳು, ಕಂಡುಬರುತ್ತದೆ ಎಂದಿದ್ದಾರೆ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು. ಕನಕನ ಕಾವ್ಯಗಳಲ್ಲಿ **'ಮೋಹನತರಂಗಣಿ'** ಪ್ರಮುಖವಾಗಿದ್ದು ಇದಕ್ಕೆ **'ಕೃಷ್ಣಚರಿತೆ'** ಎಂದು ಮತ್ತೊಂದು ಹೆಸರು ಇದೆ. ಇಲ್ಲಿ ಭಕ್ತಿ ಗುರಿಯಾದವರು, ಕಾವ್ಯವು ರಸವತ್ತಾಗಿದೆ.

ಹಾಗೆಯೇ **'ನಳಚರಿತೆ'** ಅತ್ಯಂತ ರಮ್ಯವಾದ ಒಂದು ಕಥನ ಕಾವ್ಯ. ಮಹಾಭಾರತದಿಂದ ಎತ್ತಿಕೊಂಡಿರುವ ಕಥಾವಸ್ತು ಇಲ್ಲಿ ಇದ್ದೂ, ಭಾಮಿನಿ ಷಟ್ಪದಿಯಲ್ಲಿದೆ. **'ಹರಿಹರ ಭಕ್ತಿ ಸಾಗರ'**ವು ಎಷ್ಟು ಸರಳವೋ ಅಷ್ಟೇ ಹೃದಯಂಗಮವಾಗಿದೆ. **'ರಾಮ ಧಾನ್ಯ ಚರಿತೆ'** ಚಮತ್ಕಾರಯುಕ್ತವಾದ ಒಂದು ಖಂಡಕಾವ್ಯ. ಇದರಲ್ಲಿ ರಾಗಿಯ ಹಿರಿಮೆಯನ್ನು ತಿಳಿಸಲಾಗಿದೆ.

ಉತ್ತಮ ಜಾತಿಯವರೆನಿಸಿಕೊಂಡವರು. ಶ್ರೀಮಂತರೆನಿಸಿಕೊಂಡವರು ಅಂತಸ್ಸತ್ತ್ವವಿಲ್ಲದರಾಗಿದ್ದು ಕೇವಲ ಅಹಂಕಾರಿಗಳಾಗಿ ಬಹಿರಾಡಂಬರದಿಂದ ಬಾಳತಕ್ಕವರು ದೈವಕ್ಕೆ ದೂರಾದವರು ಎಂದು ಕವಿ ಸೂಚಿಸುವಂತಿರುವಂತೆ ಭಾಸವಾಗುತ್ತದೆ. ಕವಿ ಕನಕನ ಹಾಡುಗಳಲ್ಲಿ ಸಾಕಷ್ಟು ವ್ಯಂಗ್ಯ ಉಕ್ತಿ ಚಾತುರ್ಯಗಳನ್ನು ನಾವು ಕಾಣುತ್ತೇವೆ. **'ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳ ಲೇಸು'** ಎಂದು ಸಮಾಜಕ್ಕೆ ಕರೆ ನೀಡುತ್ತಾರೆ.

ಕನಕನು ತಮ್ಮ ಜೀವಿತಾವಧಿಯಲ್ಲಿ ಅನೇಕ ಪವಾಡಗಳನ್ನು ಮಾಡಿರುವುದು ತಿಳಿದುಬರುತ್ತದೆ. ಹೀಗಾಗಿ ಈತನನ್ನು ದಾಸ ಪಂಥದವರು **'ಯಮ ಧರ್ಮನ ಅವತಾರ'** ಎಂದು ಕರೆದು ಗೌರವಿಸುತ್ತಾರೆ.

ಕನಕದಾಸರು ಬದುಕಿದ ಪರಿಸರ ಮತ್ತು ಆ ಕಾಲದ ಧಾರ್ಮಿಕ ಸಳೆತಗಳನ್ನು ಈ ನೆಲಗುಣದ ಇತಿಹಾಸಕ್ಕೆ ಸಮೀಕರಿಸಿ ನೋಡಿದರೆ ಅಂದಿನ ಕನಕದಾಸರಿಂದ ಇಂದು ಇನ್ನೂ ಹೆಚ್ಚಿನದನ್ನು ನಿರೀಕ್ಷಿಸುವುದರಲ್ಲಿ ಅರ್ಥವಿಲ್ಲವೇನೋ, ದರಿದ್ರ ಮೌಲ್ಯ ವ್ಯವಸ್ಥೆಯ ಈ ನಾಡಿನಲ್ಲಿ ಹುಟ್ಟು ಪ್ರತಿಭೆಯನ್ನು ರೂಢಿಸಿಕೊಂಡು, ತನ್ನ ಜೀವನದ ಅರ್ಥ ಹುಡುಕಬಯಸಿದರು. ತಾನು ನಿಂತ ನೆಲದ ವಿಪರ್ಯಾಸಗಳು ಇಲ್ಲವಾಗಬೇಕೆಂದು ಬಯಸಿದ ಕನಕದಾಸರ ನೈಜ ಬದುಕು, ಜೀವನ ಸಂದೇಶ ಈ ನಾಡಿನ ಕೆಳವರ್ಗದ ಸಾಮಾನ್ಯನೊಬ್ಬನ ಅಸಹಾಯಕತೆ, ತೊಳಲಾಟ, ದುರಂತಗಳೊಳಗೇ ಉಳಿದುಹೋದದ್ದು ನಾವು ಕಾಯ್ದಿಟ್ಟುಕೊಂಡ ಈ ಸಮಾಜ ವ್ಯವಸ್ಥೆಯೇ ಕಾರಣವಿರಬಹುದೆ ?

ಅಧ್ಯಾಯ – ೬

# ಸಮಾರೋಪ

ಹರಿದಾಸ ಸಾಹಿತ್ಯದಲ್ಲಿ ಎಲ್ಲಾ ಹಂತಗಳಲ್ಲೂ ಕಾಣುವ ಸಮಾನ ಸಂಗತಿಗಳೆಂದರೆ, ಆತ್ಮನಿವೇದನೆ, ಸ್ತೋತ್ರ, ಉಪದೇಶ, ತತ್ತ್ವಚಿಂತನೆ, ಸಾಹಿತ್ಯಿಕ–ಸಾಮಾಜಿಕ ಮೌಲ್ಯಗಳು ಮುಂತಾದ ವಿಷಯವ್ಯಾಪ್ತಿಯಲ್ಲಿ ಬರುವ ಭಕ್ತಿ ನಿರ್ಭರ ರಚನೆಗಳು. 'ಹರಿ' ಎಂಬ ಪರಾಶಕ್ತಿಯಲ್ಲಿ ಅಚಲ ಶ್ರದ್ಧೆಯನ್ನಿರಿಸಿ, ಆತ್ಮೀಕರಿಸಿಕೊಂಡು, ಅದಕ್ಕೆ ತಮ್ಮನ್ನೇ ಅರ್ಪಿಸಿಕೊಳ್ಳುವ ಸಂಪೂರ್ಣ ಸಮರ್ಪಣಾಭಾವ, ಶರಣ್ಯತೆ ಹರಿದಾಸರೆಲ್ಲರ ಕೃತಿಗಳ ಸಮಾನ ಲಕ್ಷಣ. ಮನಸ್ಸು, ಮಾತು ಕೃತಿಗಳೆಲ್ಲದರಲ್ಲಿಯೂ ಭಗವದನುಸಂಧಾನ ನಡೆಯುತ್ತಿರಬೇಕೆಂಬುದು ಹರಿದಾಸರು ಸ್ವೀಕರಿಸಿದ ವ್ರತ.

ವ್ಯಾಸರಾಯರು ಪೋಷಿಸಿ, ಬೆಳೆಸಿದ ಭಕ್ತಿ ವೃಕ್ಷಕ್ಕೆ ಪುರಂದರದಾಸರು, ಕನಕದಾಸರು ಎರಡು ಮುಖ ಶಾಖೆಗಳು ನಿಜ. ಭಕ್ತಿ ಸಾಹಿತ್ಯದ ಇತಿಹಾಸದಲ್ಲಿ ಇವರಿಬ್ಬರ ಹೆಸರಿಗೂ ಸಮಾನ ಗೌರವವಿರುವುದೂ ಸತ್ಯ. ಶ್ರೀ ಜಿ.ಎಸ್. ಶಿವರುದ್ರಪ್ಪನವರು ಸರಿಯಾಗಿಯೇ ಗುರುತಿಸಿದಂತೆ 'ಪುರಂದರದಾಸರ ಕೀರ್ತನೆಗಳು ಮತ್ತು ಕನಕದಾಸರ ಕೀರ್ತನೆಗಳು ಕಾವ್ಯಗುಣಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡಿರುವುದನ್ನು ಕಾಣಬಹುದಾಗಿದೆ'.

ಪುರಂದರದಾಸರ ರಚನೆಗಳು ಆತ್ಮೀಯವೂ, ಸ್ವಾನುಭವ ಪ್ರಮಾಣ್ಯವೂ ಆಹ್ಲಾದಕಾರಿಣಿಯಿಂದಲೂ ಸಾಹಿತ್ಯಿಕ ಮೌಲ್ಯವನ್ನು ಪಡೆದುಕೊಂಡಿವೆ. ಈ ಸಾಹಿತ್ಯಿಕ ಮೌಲ್ಯವನ್ನು ಮನವರಿಕೆಯಾಗಲು ಭಕ್ತ ಮತ್ತು ಭಗವಂತನ ಸಂಬಂಧದ ಪಂಚವಿಧ ಭಾವನೆಗಳಾದ ಶಾಂತ, ದಾಸ್ಯ, ಸಖ್ಯ, ಮಧುರ ಮತ್ತು ವಾತ್ಸಲ್ಯಗಳು ಬಹಳ ನೆರವಾಗುತ್ತವೆ. ಪುರಂದರದಾಸರ ಕೀರ್ತನೆಗಳ ವ್ಯಾಪ್ತಿ ಬಾಲಲೀಲೆ ವಾತ್ಸಲ್ಯ ಸೀಮಿತವಾಗುವುದಿಲ್ಲ. ತಮ್ಮ ಸುತ್ತ ಮುತ್ತಲಿನ ಸಮಾಜ ಜೀವನದ ಕಡೆಗೂ ಅವರ ಲೋಕಾನುಭವದ ದೃಷ್ಟಿ ಹರಡಿದೆ. ವಚನಕಾರರಂತೆ ಅವರು ಯಾವ ಸಾಮಾಜಿಕ ಕ್ರಾಂತಿಯನ್ನು ತರಲಿಲ್ಲವಾದರೂ ಮಾನವರ ನಡೆ–ನುಡಿಗಳ ಓರೆಕೋರೆಗಳನ್ನು ಕುರಿತು ಜೀವನದ ನಿರ್ವಹಣೆಗೆ ಎಷ್ಟು ಅಮೂಲ್ಯವಾದ

ಸಲಹೆಗಳನ್ನು ನೀಡಿದರೆಂಬುದು ವಿದಿತವಾಗುತ್ತದೆ. ಪುರಂದರದಾಸರು ಬೂಟಾಟಿಕೆಯನ್ನು ಡಂಭಾಚಾರವನ್ನು ಬಹಳ ಕಟುವಾಗಿ ಖಂಡಿಸಿದ್ದಾರೆ.

ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಾಂಶ ಪ್ರಧಾನವಾಗಿರುವುದನ್ನು ಹಲವು ವಿಮರ್ಶಕರು ಗುರುತಿಸಿದ್ದಾರೆ. ಅವರು ಬಳಿಸಿರುವ ಪದ ಪ್ರಯೋಗ, ಅಲಂಕಾರಗಳು, ಛಂದಸ್ಸು, ಚಮತ್ಕಾರ, ವರ್ಣನೆಗಳಲ್ಲಿ ಕಾವ್ಯ ಪ್ರಜ್ಞೆಯೇ ಎದ್ದು ಕಾಣುತ್ತದೆ. ಗ್ರಾಮ್ಯ ಭಾಷೆಯ ಹಿಡಿತ, ಭಾವಗೀತಾತ್ಮಕತೆ, ಜಾನಪದಸತ್ವವನ್ನುಳ್ಳ ಅಂಶಗಳನ್ನು ಗುರುತಿಸಬಹುದು. ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಜನರ ನಡುವಳಿಕೆ ಸಮಾಜದಲ್ಲಿ ಬೇರು ಬಿಟ್ಟ ರೂಢಿಗತವಾದ ಸಂಪ್ರದಾಯಗಳು, ಜಾತಿ–ಮತ ವ್ಯವಸ್ಥೆಗಳು, ಬಡವ–ಬಲ್ಲಿದ, ಮೇಲು–ಕೀಳೆಂಬ ತಾರತಮ್ಯ, ಹಳಸಲು ಮೌಲ್ಯಗಳು, ಬದುಕಿನ ಆಡಂಬರ ಮೊದಲಾದ ವಿಚಾರಗಳನ್ನು ವಿಡಂಬಿಸಿರುವ ರೀತಿ ಅನನ್ಯವಾದುದು. ಹೀಗೆ ಮಾಡುವಾಗ ಇವರು ವಾಸ್ತವತೆಯ ಕಠೋರ ಸತ್ಯವನ್ನು ಪರಿಣಾಮಕಾರಿಯಾಗಿ ಅನಾವರಣಗೊಳಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ.

ಒಟ್ಟಾರೆಯಾಗಿ ದಾಸ ಸಾಹಿತ್ಯದಲ್ಲಿ ಕವಿತೆಯ ಸೊಬಗನ್ನೂ, ಸಾಮಾಜಿಕ ಕಳಕಳಿಯನ್ನೂ ಜೊತೆಗೂಡಿಸಿ ವಾಙ್ಮಯ ಸಾಹಿತ್ಯ ರಂಗವನ್ನು ಶ್ರೀಮಂತಗೊಳಿಸಿದವರು ಪುರಂದರದಾಸರು ಮತ್ತು ಕನಕದಾಸರು. ಇವರಿಬ್ಬರೂ ಹರಿದಾಸ ಸಾಹಿತ್ಯದ ಎರಡು ಕಣ್ಣುಗಳು ಎಂದರೆ ತಪ್ಪಾಗಲಾರದು.

-----

ಅನುಬಂಧ – ೧

## ಪರಮಾರ್ಶನ ಗ್ರಂಥಗಳು

೧. ಪುರಂದರ ಸಾಹಿತ್ಯ ದರ್ಶನ – ಪ್ರೊ. ಎಸ್.ಕೆ. ರಾಮಚಂದ್ರರಾವ್
೨. ಕರ್ಣಾಟಕದ ಹರಿದಾಸರು – ಡಾ. ಎಚ್.ಕೆ. ವೇದವ್ಯಾಸಚಾರ್ಯ
೩. ಪುರಂದರದಾಸರ ಕೀರ್ತನೆ – ಪಾವಂಜೆ ಗುರುರಾವ್ ಅಂಡ್ ಸನ್ಸ್
೪. ಕರ್ನಾಟಕ ಹರಿದಾಸರ ಉಗಮ ಮತ್ತು ಶ್ರೀ ಪುರಂದರದಾಸರ ಸುಳಾದಿಗಳು – ಹನುಮಂತರಾವ್, ಗೋರಬಾಳ
೫. ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ – ರಾಮರಾವ್, ಸುಬೋಧ ಎಂ.
೬. ಮತ್ತು ಬಂದಿದೆ ಕೇರಿಗೆ – ಸುರೇಶ್ ನಾಗಲ ಮಡಿಕೆ
೭. ಕಲ್ಲು ಸಕ್ಕರೆ ಕೊಳ್ಳಿರೊ – ಎಚ್.ಎನ್. ಮುರಳಿಧರನ್
೮. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ – ಡಾ. ಚಿ.ಸಿ. ನಿಂಗಣ್ಣ, ೨೦೧೨
೯. ಕನ್ನಡ ಸಾಹಿತ್ಯ ಸಂಗಾತಿ – ಡಾ.ಜಿ.ಬಿ.ಹರೀಶ್
೧೦. ಕೀರ್ತನಕಾರರು – ಎಚ್.ಎಸ್. ವೆಂಕಟೇಶಮೂರ್ತಿ
೧೧. ದಾಸಮಾನಸ – ಪುರಂದರದಾಸರ ೫೦೦ನೇ ಹುಟ್ಟುಹಬ್ಬ ಪ್ರಯುಕ್ತ, ಕೀರ್ತನಕಾರರ ಸಮ್ಮೇಳನ ಸಮಿತಿ, ಹಾದಿಗಲ್ಲು, ಶಿವಮೊಗ್ಗ ಜಿಲ್ಲೆ
೧೨. ಕನಕ ಕಿರಣ – ಚಿಕ್ಕಣ್ಣ.ಕಾ.ತ., ಬೆಂಗಳೂರು
೧೩. ಕನಕ ಮತ್ತು ಪುರಂದರರ ಕೀರ್ತನೆಗಳು – ಜಿ.ಜಿ. ಮಂಜುನಾಥನ್
೧೪. ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯ ಮೌಲ್ಯ – ಶ್ಯಾಮಸುಂದರ ಬಿದರಕಕುಂದಿ
೧೫. ಕನ್ನಡದಲ್ಲಿ ಕೀರ್ತನ ಸಾಹಿತ್ಯ ಮತ್ತು ಕನಕ ಕೀರ್ತನೆಗಳು – ಎಂ. ಜೈಕುಮಾರ್
೧೬. ಕನಕದಾಸರ ಕೀರ್ತನೆಗಳು – ಪಾವಂಜೆ ಗುರುರಾವ, ಉಡುಪಿ
೧೭. ಕನಕದಾಸರ ಚತುಶ್ಯತಮಾನೋತ್ಸವ ಸಂಸ್ಮರಣ ಸಂಪುಟ – ದ.ರಾ. ಬೇಂದ್ರೆ
೧೮. ಭಕ್ತ ಕನಕದಾಸರ ಜೀವನ ಮತ್ತು ಕೀರ್ತನೆಗಳು – ಲಕ್ಷ್ಮಿ ನರಸಿಂಹಶಾಸ್ತ್ರಿ
೧೯. ಜನಪ್ರಿಯ ಕನಕ ಸಂಪುಟ – ಜವರೇಗೌಡ
೨೦. ಮುಕ್ತ ಕನಕದಾಸ – ಶ್ರೀನಿವಾಸಯ್ಯಂಗಾರ್, ಎಂ.ಬಿ., ಮೈಸೂರು
೨೧. ಪ್ರಾರ್ಥನಾ ಸುಳಾದಿಗಳು – ಶ್ರೀವರದೇವೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು.
೨೨. ದಾಸ ಸಾಹಿತ್ಯ ಸೌರಭ : ಡಾ. ಮಧುಸೂಧನಾಚಾರ್ಯ ಜೋಷಿ.

# ಅನುಬಂಧ – ೦೨

# ಛಾಯಾಚಿತ್ರಗಳು

ಪುರಂದರದಾಸರ ಕುರಿತಂತೆ ಕೆಲವು ಛಾಯಾಚಿತ್ರಗಳು:




ಪುರಂದರದಾಸರು



ಕಲ್ಲಿನ ಕೆತ್ತನೆಯಲ್ಲಿ ಕಂಡ ಪುರಂದರದಾಸರು, ಹಂಪಿ

ಆರ್.ಕೆ. ಪದ್ಮನಾಭ, ಪುರಂದರದಾಸರ ತಜ್ಞರ ಸಮಿತಿಯ ಅಧ್ಯಕ್ಷರು, ಅರಗಾದಲ್ಲಿ ಪುರಂದರದಾಸರ ಜನ್ಮಸ್ಥಳದ ಕುರಿತು ಸಂಶೋಧನೆ ನಡೆಸುತ್ತಿರುವುದು




ಭಾರತೀಯ ಅಂಚೆಯಲ್ಲಿ ಪುರಂದರದಾಸರು



ಧ್ಯಾನ ನಿರತ ಪುರಂದರದಾಸರು




ಮಾನವ ನಿರ್ಮಿತ ಪುರಂದರದಾಸರ ಪ್ರತಿಮೆ




PURANDARA DASA

THE FATHER OF CARNATIC MUSIC

Vol.DG45 www.amarchitrakatha.com

ಸಾಮಾಜಿಕ ಧೋರಣೆಗೆ ಒಳಗಾಗಿದ್ದ ಪುರಂದರದಾಸರು

ಕನಕದಾಸರ ಕುರಿತಂತೆ ಕೆಲವು ಛಾಯಾಚಿತ್ರಗಳು:



ಭಕ್ತ ಕನಕದಾಸರು




ಭಾರತೀಯ ಅಂಚೆ ಸ್ಟಾಂಪ್‌ಲ್ಲಿ ಕನಕದಾಸರು




ಕನಕನ ಕಿಂಡಿ, ಉಡುಪಿ



ಕನಕದಾಸ ಕೋಟೆ ಮತ್ತು ಅರಮನೆ, ಬಾಡ ಗ್ರಾಮ, ಧಾರವಾಡ ಜಿಲ್ಲೆ




ಕನಕದಾಸರ ಕಲ್ಲಿನ ಪ್ರತಿಮೆ





ಕನಕ ನ ಕಿಂಡಿಯನ್ನು ವೀಕ್ಷಿಸುತ್ತಿರುವ ಎ.ಪಿ.ಜೆ. ಅಬ್ದುಲ್ ಕಲಾಂ ಅವರು



ಕಾಗಿನೆಲೆ ದೇವಸ್ಥಾನ



ಕನಕ ಗುರುಪೀಠ




ಕನಕರ ಕಾಲದ ಸಾಮಾಜಿಕ ಚಿತ್ರಣವನ್ನು ತೋರಿಸುವ ಚಿತ್ರ

